ಮಹಾತ್ಮರ ಮನೋರಂಗ
ಅನುವಾದಕರು:
ಶ್ರೀ. ರಂ. ರಾ. ದಿವಾಕರ
ಜೀವನದ ವಿವಿಧ ಸಮಸ್ಯೆಗಳ ಬಗ್ಗೆ ಗಾಂಧೀಜಿಯ ವಿಚಾರಗಳನ್ನು ಅವರ ಭಾಷಣ ಲೇಖನಗಳಿಂದಲೇ ಆಯ್ದು, ಸಂಗ್ರಹಿಸಿದ ಪುಸ್ತಕ.
೩೦೪ ಪುಟ, ಬೆಲೆ: ೪-೮-೦
ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ

ಬೆಲೆ: ಎರಡು ಆಣೆ

# ಕರ್ಮವೀರ

ವಚನಶಾಸ್ತ್ರ ರಹಸ್ಯ
ಲೇ: ಶ್ರೀ. ರಂ. ರಾ. ದಿವಾಕರ
ಕರ್ನಾಟಕದ ಅನುಭಾವಿಗಳು ಹೇಳಿದ ಶಿವಶರಣ ವಚನಗಳ ಬಗ್ಗೆ ವಿಚಾರ ಪರಿಪ್ಲುತ ಹಾಗು ಸಾಂಶಿಕ್ಷ ಪೂರ್ಣ ವಿವೇಚನೆ.
ಬೆಲೆ: ೫ ರೂಪಾಯಿ
ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ

ಸಂಪಾದಕರು:
ಹ. ರಾ. ಪುರೋಹಿತ, ಎಂ. ಎ.

)——ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ——(

Editor:
H. R. Purohit, M. A.

—( ಸಂಪುಟ ೧೯ )— ಹುಬ್ಬಳ್ಳಿ ಸೋಮವಾರ ತಾರೀಖು ೧೦—೧೧—೧೯೪೭ —( ಸಂಚಿಕೆ ೩೦ )—

# ಅಂತರ್ರಾಷ್ಟ್ರೀಯ ಕಾಯದೆಗೆ ಭಂಗ ತಂದ ಪಾಕಿಸ್ತಾನ!

## ಕಾಶ್ಮೀರದಲ್ಲಿ ಪುಂಡರ ದಾಳಿ—ಅವರಿಗೆ ಪಾಕಿಸ್ತಾನದ ಸಹಕಾರ—ಪಾಕಿಸ್ತಾನ ಬಗೆದ ಮಿತ್ರದ್ರೋಹ—ಹಿಂದುಸ್ತಾನ ತೆಗೆದುಕೊಂಡ ನ್ಯಾಯಸಿದ್ಧ ಕ್ರಮ.

ಕಾಶ್ಮೀರದ ಪರಿಸ್ಥಿತಿಯೆಷ್ಟು ಭಯಂಕರವಾಗಿದೆ! ದಾಳಿಕಾರರ ಶಸ್ತ್ರಾಸ್ತ್ರ ಸನ್ನದ್ಧತೆ ಆಶ್ಚರ್ಯಕರವಾಗಿದೆ! ಇಷ್ಟು ಸುಸಂಘಟಿತರೂ ಸುಸಜ್ಜಿತರೂ ಆದ ದಾಳಿಕಾರರಿಗೆ ಹೇಗೆ ಮತ್ತು ಏಕೆ ಪಾಕಿಸ್ತಾನ ಸರಕಾರ ತನ್ನ ಗಡಿಯಿಂದ ಹಾಯ್ದು ಕಾಶ್ಮೀರಕ್ಕೆ ಹೋಗಗೊಟ್ಟಿತು? ಅಲ್ಲಿಯ ಸರಕಾರ ಅಷ್ಟು ದುರ್ಬಲವೋ ಅಥವಾ ಹಾಗೆ ಪುಂಡರು ಕಾಶ್ಮೀರದಲ್ಲಿ ಬಂಡೆಬ್ಬಿಸುವುದು ಪಾಕಿಸ್ತಾನಕ್ಕೆ ಇಷ್ಟವಾದುದೋ? ಎಂದು ಕೇಳಲು ಹಿಂದೀ ಒಕ್ಕೂಟಕ್ಕೆ ಹಕ್ಕಿದೆ—ಎಂದು ಹಿಂದುಸ್ತಾನ ಸರಕಾರದ ಮುಖ್ಯ ಪ್ರಧಾನರಾದ ಪಂಡಿತ ಜವಾಹರಲಾಲರು ಕಾಶ್ಮೀರಕ್ಕೆ ಹಿಂದುಸ್ತಾನವಿತ್ತ ನೆರವಿನ ಮೇಲೆ ಪಾಕಿಸ್ತಾನ ಹೊರಿಸಿದ ಮೋಸದ ಆರೋಪವನ್ನು ಉಗ್ರವಾಗಿ ಖಂಡಿಸುತ್ತ ತಮ್ಮ ಸಿಂಹಗಂಭೀರ ವಾಣಿಯಿಂದ ಕಳೆದ ೨ ನೆಯ ದಿನಾಂಕದಲ್ಲಿ ಈ ಕೆಳಗಿನಂತೆ ಹೊಸದಿಲ್ಲಿಯ ಆಕಾಶವಾಣಿಯಿಂದ ಮಾತನಾಡಿದರು.

"ಕಾಶ್ಮೀರದ ಕೊಳ್ಳದ ಸೊಬಗನ್ನು ಬಣ್ಣಿಸಲು ನಾನಿಂದು ಬಂದಿಲ್ಲ. ಆದರೆ ಇತ್ತೀಚೆಗೆ ಅದು ಎದುರಿಸಬೇಕಾಗಿ ಬಂದಿರುವ ಭಯಂಕರ ಪರಿಸ್ಥಿತಿಯ ಬಗೆಗೆ ಮಾತಾಡಬಯಸುತ್ತೇನೆ. ನಾವು ಬಹಳ ಸಂಕಟದ ದಿನಗಳನ್ನು ಕಳೆದೆವು. ಅತ್ಯಂತ ಮುಖ್ಯವಾದ ಮತ್ತು ಬಹುಕಾಲದ ವರೆಗೆ ನಿಲ್ಲಬೇಕಾದ ನಿರ್ಣಯಗಳನ್ನು ತೆಗೆದುಕೊಳ್ಳುವ ಭಾರವಿಂದು ನಮ್ಮ ಮೇಲೆ ಬಿದ್ದಿದೆ. ನಿಮಗೆ ನಾನು ಆ ವಿಷಯವಾಗಿ ಹೇಳಬೇಕೆಂದಿದ್ದೇನೆ.

ಹಿಂದೀ ಒಕ್ಕೂಟಕ್ಕೆ ಕಾಶ್ಮೀರ ಸೇರಿದ್ದಕ್ಕೆ ನೆರೆಯ ಸರಕಾರವು, ಇಲ್ಲವೆ ಹೊಣೆಗಾರ ಸರಕಾರಗಳು ಜನಗಳು ಕೂಡ ಬಳಸಬಾರದ ಭಾಷೆಯಲ್ಲಿ ಒಕ್ಕೂಟ ಸರಕಾರದ ಮೇಲೆ ಮೋಸದ ಆರೋಪ ಹೊರಿಸಿದೆ. ನಾನು ಆ ಭಾಷೆಯನ್ನು ಅನುಕರಿಸಲಾರೆ, ಅಲ್ಲದೆ, ಹಾಗೆ ಮಾಡುವ ಇಷ್ಟ ನನಗಿಲ್ಲ. ನಾನು ಹೊಣೆಗಾರ ಸರಕಾರಕ್ಕಾಗಿ ಮತ್ತು ಹೊಣೆಗಾರ ಜನರಿಗಾಗಿ ಮಾತಾಡುತ್ತೇನೆ. ಕಾಶ್ಮೀರದಲ್ಲಿ ಮೋಸ ಹಿಂಸೆಗಳು ನಡೆದವೆಂಬುದಕ್ಕೆ ನಾನು ಒಪ್ಪುತ್ತೇನೆ. ಆದರೆ ಅದಕ್ಕೆ ಯಾರು ಹೊಣೆಗಾರರು? ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾದ ಹೊರಗಣ ದಾಳಿಕಾರರು ಆಗಲೆ ಜಮ್ಮು ಮತ್ತು ಕಾಶ್ಮೀರ ಸಂಸ್ಥಾನದ ಬಹುಭಾಗಗಳನ್ನು ಆಕ್ರಮಿಸಿದ್ದಾರೆ. ಹಳ್ಳಿ ಪಟ್ಟಣಗಳನ್ನು ಕೊಂದು ಕೂಗಿ, ತಿಂದು ತೇಗಿ, ಹಾಳುಗೆಡಹಿ ಬಿಟ್ಟಿದ್ದಾರೆ. ಈ ಸುಂದರವಾದ ಮತ್ತು ಶಾಂತವಾದ ದೇಶದಲ್ಲಿ ಒಮ್ಮಿಂದೊಮ್ಮೆ ಭಯಗ್ರಸ್ತ ವಾತಾವರಣ ಉಂಟಾಯಿತು. ಮತ್ತು ಅಂದವಾದ ಕಾಶ್ಮೀರ ಕ್ಷಣದಲ್ಲಿಯೇ ನಾಶವಾಗುವ ಭೀತಿಯುಂಟಾಯಿತು.

### ವಿಚಾರ ಮಾಡಿ ತೆಗೆದುಕೊಂಡ ಕ್ರಮ

ಕಾಶ್ಮೀರದ ವಿಷಯದಲ್ಲಿ ನಾವು ತೆಗೆದುಕೊಂಡ ಪ್ರತಿಯೊಂದು ಕ್ರಮವನ್ನೂ ಮೊದಲೇ ಚನ್ನಾಗಿ ವಿಚಾರ ಮಾಡಿ ಪರಿಣಾಮವನ್ನು ಅಳೆದು ನೋಡಿ ತೆಗೆದುಕೊಂಡಿದ್ದಾಗಿದೆ. ಮತ್ತು ನಾವು ಮಾಡಿದ್ದು ಸರಿಯೆಂದು ನನಗೆ ಸಂಪೂರ್ಣ ಸಮಾಧಾನವಿದೆ. ಹಾಗೆ ಮಾಡದೆ ಹೋಗಿದ್ದರೆ ನಂಬಿಗೆಗೆ ದ್ರೋಹ ಮಾಡಿದಂತಾಗುತ್ತಿತ್ತಲ್ಲದೆ ದೊಡ್ಡಯ ಕಾಯದೆಗೆ ಮತ್ತು ಅದರ ಪರಿಣಾಮವಾದ ಕೊಳ್ಳೆ, ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಕೊಲೆ, ಮುಂತಾದವುಗಳಿಗೆ ಹೇಡಿತನದಿಂದ ತಲೆಬಾಗಿದಂತಾಗುತ್ತಿತ್ತು.

ಕಲವು ವಾರಗಳಿಂದ ಸಂಸ್ಥಾನಕ್ಕೆ ಸೇರಿದ ಜಮ್ಮೂ ದೇಶಕ್ಕೆ ದಾಳಿಕಾರರ ದಲಗಳು ಹೊಕ್ಕು ಸುದ್ದಿ ಮುಟ್ಟಿದೆ; ಅಲ್ಲವೆ ಗಡಿನಾಡಿಗೂ ಕಾಶ್ಮೀರಕ್ಕೂ ನಡುವಣ ಪ್ರದೇಶದಲ್ಲಿ ಸಶಸ್ತ್ರ ಜನರು ಬರಲು ಸೇರುತ್ತಿರುವರೆಂದು ಕೇಳಿದ್ದೇವೆ. ಇದನ್ನು ಕೇಳಿ ನಾವು ಜಾಗ್ರತರಾಗುವುದು ಸಹಜವಾದದ್ದು. ಏಕೆಂದರೆ, ಕಾಶ್ಮೀರಿಗಳಿಗೂ ನಮಗೂ ಬಹು ಹತ್ತಿರದ ಸಂಬಂಧವಿರುವದಷ್ಟೇ ಅಲ್ಲದೆ ಕಾಶ್ಮೀರವು ದೊಡ್ಡ ದೊಡ್ಡ ರಾಷ್ಟ್ರಗಳ ನೆರೆಯಲ್ಲಿರುವ ದೇಶವಾಗಿದೆ. ಈ ಕಾರಣದಿಂದ ಅಲ್ಲಿಯ ಚಟುವಟಿಕೆಯಲ್ಲಿ ನಾವು ಅಗತ್ಯವಾಗಿ ಆಸಕ್ತಿ ವಹಿಸಬೇಕಾಗಿದೆ. ನಾವು ಅದರಲ್ಲಿ ಕೈ ಹಾಕಬಾರದೆಂದು ಬಹಳ ಎಚ್ಚರದಿಂದಿದ್ದೆವು, ಮತ್ತು ಜಮ್ಮೂದ ಒಂದು ಭಾಗವೇ ದಾಳಿಕಾರರ ಸುಲಿಗೆಗೆ ತುತ್ತಾದರೂ ನಾವು ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ.

### ಸತ್ಯಾಸತ್ಯ ವಿಚಾರ

ಪಾಕಿಸ್ತಾನದ ಗಡಿಯೊಳಗೆ ಜಮ್ಮೂದ ಕಡೆಯಿಂದ ದಾಳಿ ನಡೆಯಿತೆಂದೂ ಜಮ್ಮೂದಲ್ಲಿ ಜಾತೀಯ ತೊಂದರೆಯೆದ್ದಿತೆಂದೂ ಮುಸ್ಲಿಮರನ್ನು ಕೊಲ್ಲುವುದೂ ಹೊರಗಟ್ಟುವುದೂ ನಡೆಯಿತೆಂದೂ ಹೇಳಲಾಗಿದೆ. ಹಿಂದು, ಶೀಖ, ಮುಸ್ಲಿಮ ಯಾವನಾದರೇನು; ಕೇಡು ಮಾಡಿದವ

ಅದು ತಪ್ಪೆಂದು ಹೇಳಲು ನಾವು ಹಿಂದೆ ಎಂದೂ ಹಿಂಜರಿಯುತ್ತಿದ್ದಿಲ್ಲ. ಆದುದರಿಂದ ಹಿಂದುಗಳಿರಲಿ, ಶೀಖರಿರಲಿ, ಮುಸ್ಲಿಮರಿರಲಿ-ಸಂಸ್ಥಾನದ ಯಾವ ಪಂಗಡದವರಾದರೂ ಇರಲಿ— ಜಮ್ಮೂದಲ್ಲಿ ಕೆಟ್ಟ ನಡತೆಯನ್ನು ತೋರಿದ್ದರೆ ಅದನ್ನು ನಾವು ಖಂಡಿತವಾಗಿ ಹೀಗಳೆದು ಅವರ ಕೃತ್ಯಗಳ ಬಗ್ಗೆ ಪಶ್ಚಾತ್ತಾಪ ಪಡುತ್ತೇವೆ. ಆದರೆ ಪಾಕಿಸ್ತಾನದ ದಾಳಿಕಾರರಿಂದ ಹಾಳುಗೆಡಹಲ್ಪಟ್ಟ ಜಮ್ಮೂದ ೯೫ ಹಳ್ಳಿಗಳ ಸಂಪೂರ್ಣವಿವರ ಕೊಡುವ ಪಟ್ಟಿಯೇ ನನ್ನ ಬಳಿದೆ. ತಕ್ಕ ಮಟ್ಟಿಗೆ ದೊಡ್ಡದಾದ ಭೀಮಭಾರವೆಂಬ ಪಟ್ಟಣವನ್ನು ಸಂಪೂರ್ಣವಾಗಿ ನಾಶ ಮಾಡಲಾಗಿದೆ. ಇತರ ಪಟ್ಟಣಗಳನ್ನು ಆಕ್ರಮಿಸಿದ್ದಲ್ಲದೆ ಪೂಂಚ, ಮೀರಪುರಗಳ ಬಹುಭಾಗವು ದಾಳಿಕಾರರ ಕೈಯಲ್ಲಿದೆ. ಇದು ಕಾಶ್ಮೀರದ ಕಡೆಯಿಂದ ಪಶ್ಚಿಮ ಪಂಜಾಬಿನ ಕಡೆಗೆ ದಾಳಿ ನಡೆದುದನ್ನು ತೋರಿಸುತ್ತದೋ ಅಥವಾ ಪಶ್ಚಿಮ ಪಂಜಾಬಿನಿಂದ ಕಾಶ್ಮೀರ ಸಂಸ್ಥಾನದೊಳಗೆ ದಾಳಿ ನಡೆದುದನ್ನು ತೋರಿಸುತ್ತದೋ? ಈ ದಾಳಿಕಾರರ ಹತ್ತಿರ ಅತ್ಯಾಧುನಿಕ ಮಾದರಿಯ ಶಸ್ತ್ರಾಸ್ತ್ರಗಳಿವೆ. ಉರಿಚೆಲ್ಲುವ ಶಸ್ತ್ರವನ್ನು ಅವರು ಉಪಯೋಗಿಸಿದ್ದಾರೆಂದೂ ಅವರ ಹತ್ತಿರ ಒಂದು ಹಾಳಾದ ಟ್ಯಾಂಕು ಕೂಡ ಸಿಕ್ಕಿದೆಯೆಂದೂ ಗೊತ್ತಾಗುತ್ತದೆ.

### ದಾಳಿಯ ಮೇಲೆ ದಾಳಿ

ಈಗ ಕಾಶ್ಮೀರ ಸಂಸ್ಥಾನವು ಆಯುಧಗಳನ್ನು ಪೂರಯಿಸಬೇಕೆಂದು ಕೇಳಿದೆ. ನಾವು ಆ ಬಗ್ಗೆ ಒತ್ತರದಿಂದ ಏನೂ ಮಾಡ ಹೋಗಲಿಲ್ಲ. ನಮ್ಮ ಸರಕಾರಗಳ ಮತ್ತು ಸಂರಕ್ಷಣ ಶಾಖೆಗಳ ಅಪ್ಪಣೆ ದೊರೆತರೂ ಯಾವ ಆಯುಧವನ್ನೂ ಕಳುಹಲಿಲ್ಲ.

ಅಕ್ಟೋಬರ ೨೪ ರ ರಾತ್ರಿಯಲ್ಲಿ ಮತ್ತೊಂದು ದಾಳಿಯ ಸುದ್ದಿ ಬಂದಿತು. ಮುಜಫರಬಾದಿನ ಹತ್ತಿರ ಕಾಶ್ಮೀರವನ್ನು ಹೊಗುವ ಅಬೋಟಾಬಾದ-ಮಾನಸೇರಾ ರಸ್ತೆಯಿಂದ ಅದು ನಡೆಯಿತು. ಸುಸಜ್ಜಿತ ಶಸ್ತ್ರಾಸ್ತ್ರಗಳುಳ್ಳ ಜನರು ನೂರಕ್ಕೂ ಮಿಕ್ಕಿದ ಸಂಖ್ಯೆಯಲ್ಲಿ ಲಾರಿಗಳಲ್ಲಿ ಕುಳಿತು ಒಳನುಗ್ಗಿ ಮುಜಫರಬಾದನ್ನು ಲೂಟಿ ಮಾಡಿ ಅನೇಕರನ್ನು ಕೊಂದು ಅಲ್ಲಿಯ ಜಿಲ್ಲಾ ಮ್ಯಾಜಿಸ್ಟ್ರೇಟರನ್ನು, ತೀರಿಸಿ ಜೇಲಂ ಕಣಿವೆಯ ಮಾರ್ಗವಾಗಿ ಶ್ರೀನಗರಕ್ಕೆ ಪಯಣ ಮಾಡುತ್ತಿದ್ದಾರೆಂಬ ನಮಗೆ ಸುದ್ದಿ ಮುಟ್ಟಿತು. ಸಂಸ್ಥಾನದ ಸೈನ್ಯವು ಅದರ ನಾನಾ ಭಾಗಗಳಲ್ಲಿ ತುಣುಕು ತುಣುಕಾಗಿ ಹರಡಿ ಹೋಗಿತ್ತು. ಅದರಿಂದ ಅದು ಈ ಸುಸಜ್ಜಿತ ಶಸ್ತ್ರಾಸ್ತ್ರಗಳುಳ್ಳ ಸುಸಂಘಟಿತ ದಾಳಿಯನ್ನು ನಿಲ್ಲಿಸಲಾರದಾಯಿತು. ಹಿಂದು ಮುಸ್ಲಿಂ ಪ್ರಜೆಗಳು ದಾಳಿಕಾರರಿಗಂಜಿ ದಿಕ್ಕಾಪಾಲಾದರು.

### ಕಾಶ್ಮೀರದ ಬಿನ್ನಹ

೨೪ರ ರಾತ್ರಿ ಮೊಟ್ಟ ಮೊದಲನೆಯ ಸಲ ಕಾಶ್ಮೀರ ಸರಕಾರವು ತನ್ನನ್ನು ಒಕ್ಕೂಟಕ್ಕೆ ಸೇರಿಸಿಕೊಂಡು ದಂಡಿನ ನೆರವೀಯಬೇಕೆಂದು ನಮ್ಮನ್ನು ಕೇಳಿತು. ೨೫ರ ಬೆಳಿಗ್ಗೆ ನಾವು ಇದನ್ನು ಸಂರಕ್ಷಣಾ ಸಮಿತಿಯಲ್ಲಿ ವಿಚಾರಕ್ಕೆ ತೆಗೆದುಕೊಂಡೆವು. ಆದರೆ ಅದರಲ್ಲಿ ಸ್ಪಷ್ಟವಾಗಿ ತೋರುವ ತೊಂದರೆಗಳತ್ತ ಲಕ್ಷ್ಯವಿತ್ತು ದಂಡು ಕಳುಹುವ ಬಗ್ಗೆ ಯಾವ ನಿರ್ಧಾರವನ್ನೂ ತೆಗೆದುಕೊಳ್ಳಲಿಲ್ಲ. ೨೬ರ ಬೆಳಿಗ್ಗೆ ಮತ್ತೆ ಈ ವಿಷಯವನ್ನು ಚರ್ಚೆಗೆ ತೆಗೆದುಕೊಂಡೆವು. ಆಗ ಪರಿಸ್ಥಿತಿಯು ಮತ್ತೂ ಬಿಕ್ಕಟ್ಟಿನದಾಗಿತ್ತು. ದಾಳಿಕಾರರು ಹಲವು ಪಟ್ಟಣಗಳನ್ನು ಲೂಟಿ ಮಾಡಿದ್ದಲ್ಲದೆ ಇಡೀ ಕಾಶ್ಮೀರ ಸಂಸ್ಥಾನಕ್ಕೇ ವಿದ್ಯುತ್ತನ್ನು ಪೂರಯಿಸುವ ಮಹೋಲದ ವಿದ್ಯುತ್ತಿನ ಕಾರಖಾನೆಯನ್ನು ನಾಶಗೊಳಿಸಿದರು. ಅವರು ಕಣಿವೆಯನ್ನು ಹೊಗುವುದರಲ್ಲಿದ್ದರು. ಶ್ರೀನಗರದ ಮತ್ತು ಇಡೀ ಕಾಶ್ಮೀರದ ಅದೃಷ್ಟವು ತೂಗುಯ್ಯಾಲೆಯಾಡುತ್ತಿತ್ತು.

ಆಗ ಮಹಾರಾಜರ ಸರಕಾರದಿಂದ ಮತ್ತು ರಾಷ್ಟ್ರೀಯ ಪರಿಷತ್ತಿನ ಅಧ್ಯಕ್ಷರಾದ ಶೇಖ ಮಹಮದ್ ಅಬ್ದುಲ್ಲಾರಂಥ ಸುಪ್ರಸಿದ್ಧ ಮುಖಂಡರೂ ಜನಪ್ರತಿನಿಧಿಗಳೂ ಅದವರಿಂದ ಕೂಡಲೆ ಸಹಾಯದೊರೆಯಬೇಕೆಂಬ ವಿನಂತಿ ನಮಗೆ ಮುಟ್ಟಿತು. ಕಾಶ್ಮೀರದ ಸರಕಾರ ಮತ್ತು ರಾಷ್ಟ್ರೀಯ ಪರಿಷತ್ತು ಇವೆರಡೂ ಕಾಶ್ಮೀರವನ್ನು ಹಿಂದೀ ಒಕ್ಕೂಟಕ್ಕೆ ಸೇರಿಸಿಕೊಳ್ಳಬೇಕೆಂದು ಒತ್ತಾಯಪಡಿಸಿದವು. ಈ ಸೇರಿಕೆಗೊಪ್ಪಿ ನಾವು ದಂಡನ್ನು ಕಳುಹಲು ನಿರ್ಧರಿಸಿದೆವು; ಆದರೆ ಅದಕ್ಕೆ ಶಾಂತಿ ಸುವ್ಯವಸ್ಥೆ ನೆಲೆಸಿದಬಳಿಕ ಪ್ರಜಾಮತ ತೆಗೆದುಕೊಳ್ಳಬೇಕೆಂಬ ಕರಾರು ಹಾಕಿದೆವು. ಬಿಕ್ಕಟ್ಟಿನಲ್ಲಿ ಕಾಶ್ಮೀರಿಗಳಿಗೆ ತಮ್ಮ ಅಭಿಪ್ರಾಯವನ್ನು ತಿಳಿಸಲು ಸಂಪೂರ್ಣ ಅವಕಾಶವೀಯದೆ ಕೊನೆಯ ಮಾತನ್ನು ನಿರ್ಧರಿಸಬಾರದೆಂದು ನಾವು ಮೊದಲೇ ಬಹಳ ಎಚ್ಚರಿಕೆ ತೆಗೆದುಕೊಂಡಿದ್ದೆವು. ಕೊನೆಯ ನಿರ್ಧಾರ ತೆಗೆದುಕೊಳ್ಳುವುದು ಅವರಿಗೆ ಸೇರಿದ್ದಾಗಿತ್ತು.

ಇಲ್ಲಿ ನಾನು ಒಂದು ವಿಷಯವನ್ನು ಸ್ಪಷ್ಟಮಾಡುತ್ತೇನೆ. ಯಾವದಾದರೊಂದು ಸಂಸ್ಥಾನವು ಒಕ್ಕೂಟವನ್ನು ಸೇರುವುದರ ಬಗ್ಗೆ ಜಗಳವೆದ್ದರೆ ಅಲ್ಲಿ ಆ ಸಂಸ್ಥಾನದ ಪ್ರಜೆಗಳೇ ನಿರ್ಣಯ ಕೊಡತಕ್ಕದ್ದೆಂಬುದು ಎಂದಿನಿಂದಲೂ ನಡೆದು ಬಂದ ನಮ್ಮ ಧೋರಣೆ. ಈ ಧೋರಣೆಗನುಸಾರವಾಗಿಯೇ ಕಾಶ್ಮೀರವು ಒಕ್ಕೂಟಕ್ಕೆ ಸೇರುವಲ್ಲಿ ಸಂಬಂಧಪಟ್ಟ ಕಾಯದೆಗೆ ಒಂದು ಹೊಸ ಕರಾರನ್ನು ಸೇರಿಸಿದೆವು.

### ಹಿಂದುಸ್ತಾನ ದಂಡಾಳುಗಳ ಧಾವತಿ

ಅಕ್ಟೋಬರ ೨೬ ರ ಮಧ್ಯಾಹ್ನ ದಂಡನ್ನು ಕಳುಹಲು ನಿರ್ಧರಿಸಿದೆವು. ಶ್ರೀನಗರವು ಗಂಡಾಂತರದಲ್ಲಿತ್ತು. ಪರಿಸ್ಥಿತಿಯು ಗಂಭೀರವೂ ಗೊಂದಲಮಯವೂ ಆಗಿತ್ತು. ಅಂದು ನಮ್ಮ ಕಾರ್ಯಕರ್ತರು ಹಗಲೂ ರಾತ್ರಿಯೂ ದುಡಿದರು ಮತ್ತು ೨೭ರಂದು ಬೆಳಗಾಗುವದರೊಳಗೆ ಗಾಳಿಯ ಸವಾರಿಯಿಂದ ನಮ್ಮ ದಂಡು ಅಲ್ಲಿಗೆ ಧಾವಿಸಿತು. ಮೊದಲು ಅವರ ಸಂಖ್ಯೆ ಅಲ್ಪವಿತ್ತು. ಆದರೆ ಕೂಡಲೆ ಕೆಳಗಿಳಿದೊಡನೆಯೇ ಆಕ್ರಾಮಕ ದಲಗಳನ್ನು ತಡೆಯಲು ನುಗ್ಗಿದರು. ಮರುದಿನವೇ ಅವರ ಧೀರನಾದ ಮೇಲಧಿಕಾರಿಯು ಕೊಲ್ಲಲ್ಪಟ್ಟನು.

ಅಂದಿನಿಂದ ದಿನ ದಿನವೂ ದಂಡನ್ನೂ ಶಸ್ತ್ರಾಸ್ತ್ರಗಳನ್ನೂ ಗಾಳಿದಾರಿಯಿಂದ ಕಳುಹುತ್ತಿದೆವು. ನಮ್ಮ ದಂಡಿನ ಕಾರ್ಯಕರ್ತರು, ವೈಮಾನಿಕರು ವಿಮಾನಸಾರಥಿಗಳು ಮನಗೊಟ್ಟು ಈ ಸಾಹಸದಲ್ಲಿ ಧುಮ್ಮಿಕ್ಕಿ ಚೆನ್ನಾಗಿ ಹೆಣಗಿದ ಬಗ್ಗೆ ನನ್ನ ಮತ್ತು ನನ್ನ ಸರಕಾರದ ಪರವಾಗಿ ನಾನು ಹೆಚ್ಚಿನ ಮೆಚ್ಚಿಗೆಯನ್ನು ವ್ಯಕ್ತಪಡಿಸುತ್ತೇನೆ. ಗಾಳಿದಾರಿಯವರು ನಮ್ಮೊಡನೆ ಚೆನ್ನಾಗಿ ಸಹಕರಿಸಿದ್ದಾರೆ. ಅವರಿಗು ಕೂಡ ನಾನು ಕೃತಜ್ಞನಾಗಿದ್ದೇನೆ, ಬಿಕ್ಕಟ್ಟಿನಲ್ಲಿ ತಮ್ಮ ದೇಶಕ್ಕಾಗಿ ದುಡಿಯ ಕಾಲೋಚಿತವಾಗಿ ಹೇಗೆ ಎದ್ದು ಬರಬೇಕೆಂಬುದನ್ನು ನಮ್ಮ ಹರೆಯದವರು ಇಂದು ತೋರಿಸಿಕೊಟ್ಟಿದ್ದಾರೆ.

### ಸೈನಿಕರ ಸಾಹಸ

ಶ್ರೀನಗರವು ಗಂಡಾಂತರದಲ್ಲಿ ಸಿಕ್ಕಿತ್ತು ಮತ್ತು ದಾಳಿಕಾರರು ಅದರ ಹೊಸ್ತಿಲ ಬಳಿಯಲ್ಲಿ ಕಾದಿದ್ದರು. ಅಲ್ಲಿ ಆಡಳಿತದ ಅಧಿಕಾರಿಗಳೊಬ್ಬರೂ ಇದ್ದಿಲ್ಲ. ಪೋಲೀಸರಿಲ್ಲ, ದಂಡಿಲ್ಲ, ದೀಪ ಮತ್ತು ವಿದ್ಯುತ್ತುಗಳು ಕೆಟ್ಟು ಹೋಗಿದ್ದವು. ಅಲ್ಲಿ ಬಹಳ ಜನ ನಿರಾಶ್ರಿತರಿದ್ದರು; ಆದರೂ ಎದುರಾದ ಗಂಡಾಂತರಕ್ಕೆ ಅಂಜದೆ ತೆರೆದ ಅಂಗಡಿಗಳಿಂದಲೂ ಓಡಾಡುವ ಜನರಿಂದ ಕೂಡಿದ ರಸ್ತೆಗಳಿಂದಲೂ ಶ್ರೀನಗರವು ಯಥಾಪ್ರಕಾರ ವ್ಯವಹರಿಸುತ್ತಿತ್ತು. ಇದು ಯಾವ ಮೋಡಿಯಿಂದಾಯಿತು? ಶೇಖ ಅಬ್ದುಲ್ಲಾರೂ ರಾಷ್ಟ್ರೀಯ ಪರಿಷತ್ತಿನಲ್ಲಿಯ ಅವರ ಸಹೋದ್ಯೋಗಿಗಳೂ ಅದರ ಮುಸ್ಲಿಂ, ಹಿಂದು, ಶೀಖ ವರ್ಗಗಳ ಸ್ವತಂತ್ರರಾದ ಸ್ವಯಂಸೇವಕರೂ ಪರಿಸ್ಥಿತಿಯನ್ನು ಅಳವಡಿಸಿಕೊಂಡು ಭೀತಿಯ ಗಾಳಿ ಬೀಸದಂತೆ ದುಡಿದರು, ಸುವ್ಯವಸ್ಥೆಯನ್ನು ಕಾಯ್ದುಕೊಂಡರು. ಅನೇಕ ಕೈ ಕೆಲಸಗಳನ್ನು ಕೈಕೊಳ್ಳುವಲ್ಲಿ ಸಹಾಯ

—೬ನೇ ಪುಟಕ್ಕೆ

# ಪುಸ್ತಕ ಮತ್ತು ವಿಮರ್ಶೆ

## ಜನಪದ ರಾಷ್ಟ್ರೀಯಗೀತಗಳು

ಬರೆದವರು ಶ್ರೀ ಭೀಮಕವಿ ಸಂಪಾದಕರು ಶ್ರೀ ತಲ್ಲೂರ ರಾಯನಗೌಡರು ಪಾಟೀಲ, ಬಿ. ಎ. ಪುಟಗಳು. ಬೆಲೆ ರೂ. ೨

ಪತ್ರಿಕಾಗಳ ಮೇಲೆ ಅಂಕವಾಗಿ ಮುದ್ರಿತವ ಮೇಲಿನ ಜನಪದ ರಾಷ್ಟ್ರೀಯ ಗೀತಗಳ ಸಂಗ್ರಹ ನೋಡಲು ಮುದ್ದಾಗಿದೆ. ಹಾಡಲು ಬರುವುದು, ಆದರೆ ಕೇಳಲು ಕೆಲವು ಪದ್ಯಗಳು ಚೆನ್ನಿಲ್ಲ. ಜೀವವಾದ ಜನಪದ ಸ್ಫೂರ್ತಿಯನ್ನು ಹಿಂಬಿಸುವ ಕೆಲವೊಂದು ಪದ್ಯಗಳೂ ಇವೆ. ಜಲಸುಗಿ ಪದ್ಧತಿಯ ಪುರುಷೇರಿಸುವ ಶಕ್ತಿ ಇಲ್ಲಿ ಪೂರ್ಣವಾಗಿ ಸಾಧಿಸಿಲ್ಲವೆನ್ನಬೇಕಾಗಿದೆ. ಒಟ್ಟಿನ ಮೇಲೆ ಜನಾರ್ದನನ ದನಿಯುಂಟಿರುವ ಈ ಜನಪದಿಯನಿಸುವ ಪದ್ಯಸಂಗ್ರಹ ಸ್ವಾಗತಾರ್ಹವೆಯೆಂದು ಹೇಳಲು ಅಡ್ಡಿಯಿಲ್ಲ.

## ರಘುನಾಥನ ಸಾಹಸ

ಬರೆದವರು ಶ್ರೀ ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಎಲ್. ಎಲ್. ಬಿ. ಪ್ರಕಾಶಕರು ಶ್ರೀ ಎಂ. ರಾಮರಾವ್ ಎಸ್. ಎಸ್. ಎನ್. ಬುಕ್ ಡಿಪೋ, ನ್ಯೂ ಮಾರ್ಕೆಟ್, ಬೆಂಗಳೂರು ನಗರ ಪುಟ ೧೨೩ ಬೆಲೆ ರೂ ೧|

ಐತಿಹ್ಯಗ್ರಂಥದಲ್ಲಿ ಪ್ರಸಿದ್ಧ ವೀರನಾದ ಶಿವಾಜಿಯ ಕೈಕೆಳಗೆ ಕೆಲಸ ಮಾಡಿದ ಶೂರ ಸರದಾರರಲ್ಲೊಬ್ಬನಾದ ರಘುನಾಥನೆಂಬವನ ಸಾಹಸದ ಚಿತ್ರವಿದೆ. ಶಿವಾಜಿಯು ಎಷ್ಟೋ ವೀರನಾಗಿದ್ದರೂ ಅವನ ಜಯಕ್ಕೆ ಅವನ ಕೈಕೆಳಗೆ ಕೆಲಸಮಾಡಿದ ಅಸ್ತರೂ ಸ್ವಾಮಿನಿಷ್ಠರೂ ರಣರಸಿಕರೂ, ಆದ ಮ್ಯಾವಳಿಗಳೂ ಆದ ಶೂರಯೋಧರೂ ಪ್ರಮುಖ ಕಾರಣರೆಂಬುದು ಅವರ ಇತಿಹಾಸವನ್ನೋದುವುದರಿಂದ ತಿಳಿಯುತ್ತದೆ. ಮ್ಲೇಚ್ಛಿತವಾಗುತ್ತಿದ್ದ ಹಿಂದು ಧರ್ಮ ಸಂಸ್ಕೃತಿಗಳ ರಕ್ಷಣೆಗೆ ಬದ್ಧ ಪ್ರತಿಜ್ಞನಾಗಿ ನಿಂತ ಅಪ್ರತಿಮವೀರನೂ ಅಜಯ್ಯ ತಂತ್ರನೂ ದೇಶಭಕ್ತ ಶಿರೋಮಣಿಯೂ ಆದ ಶಿವಾಜಿಯು ಅರಿಕೇಸರಿಗಳೆನಿಸುವ ಭಟರ ಅದ್ಭುತ ಸಮರ ತಂತ್ರ, ಪ್ರತ್ಯುತ್ಪನ್ನಮತಿತ್ವ, ದೂರದರ್ಶಿತ್ವ, ಆತ್ಮವಿಶ್ವಾಸ, ಅಕಲಂಕ ಚರಿತ್ರ, ಸ್ವಾಭಿಮಾನ, ಸ್ವದೇಶಾಭಿಮಾನಗಳನ್ನು ಸಾರುವ ಅವರ ಕೃತಿಗಳಿಂದ ಯಾವ ಭಾರತೀಯನು ರೋಮಾಂಚಿತನಾಗದಿರುವನು? ಆದುದರಿಂದ ತಮ್ಮ ಸರಳ ಸುಂದರವಾದ ಶೈಲಿಯಿಂದ ಹಿರಿಯಸಾಹಿತಿಗಳೂ ಮೊನ್ನಿನ ಸಾಹಿತ್ಯಸಮ್ಮೇಳನಾಧ್ಯಕ್ಷರೂ ಆದ ಶ್ರೀ ಸಿ. ಕೆ. ವೆಂಕಟರಾಮಯ್ಯನವರ ಪ್ರಸ್ತುತ ಕೃತಿಯು ಜನಾದರ ಪಡೆವುದರಲ್ಲಿ ಏನೂ ಸಂಶಯವಿಲ್ಲ.

## ಸಂಸ್ಕೃತ ನಾಟಕ ಕಥೆಗಳು

ಬರೆದವರು ಆಸ್ಥಾನ ವಿದ್ವಾನ್ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರೀ. ಪ್ರಕಾಶಕರು ಎಸ್. ಎಸ್. ಎನ್. ಪುಸ್ತಕಾಲಯ, ಹೊಸ ಮಾರುಕಟ್ಟೆ, ಬೆಂಗಳೂರು ನಗರ ಪುಟ ೧೪೮, ಬೆಲೆ ರೂ ೧|

ಮೇಲಿನ ಗ್ರಂಥದಲ್ಲಿ ಭಾಸನ 'ಪ್ರತಿಜ್ಞಾ ಯೌಗಂಧರಾಯಣ' ಮತ್ತು 'ಸ್ವಪ್ನವಾಸವದತ್ತ' ಕಾಳಿದಾಸನ 'ವಿಕ್ರಮೋರ್ವಶೀಯ,' ಹಾಗು ವಿಶಾಖದತ್ತನ 'ಮುದ್ರಾರಾಕ್ಷಸ' ಈ ನಾಟಕಗಳ ಕಥಾವಸ್ತುಗಳನ್ನು ಸರಳವಾಗಿ ವಿವರಿಸಲಾಗಿದೆ. ಪ್ರಾಚೀನ ವಿದ್ಯಾಭ್ಯಾಸ ಪದ್ಧತಿಯು ಹಮ್ಮೀಣಿಲವಾದ ಬಳಿಕ ವಿದ್ಯಾರ್ಥಿಗಳಿಗೆ ಭಾರತೀಯ ಸಂಸ್ಕೃತಿಯ ದೆಸ್ಸು ಮೂಳೆಯಂತಿರುವ ರಾಮಾಯಣ ಮಹಾಭಾರತಗಳ ಕತೆಗಳು ಕೂಡ ಚೆನ್ನಾಗಿ ತಿಳಿದಿರದ ಪರಿಸ್ಥಿತಿಯುಂಟಾಗಿದೆ. ಎಂದಮೇಲೆ ಪ್ರಾಚೀನ ನಾಟಕಗಳ ಸುದ್ದಿಯನ್ನು ವಿಸ್ತರಿಸಬೇಕಿಲ್ಲ. ಈ ದುರ್ದಶೆಯ ನಿವಾರಣೆಗಾಗಿ ಇಂದು ಪ್ರಾಚೀನ ಸಾಹಿತ್ಯಗಳ ಸಾರವನ್ನು ತಿಳಿಗನ್ನಡದಲ್ಲಿ ಚಿಕ್ಕ ಪುಟ್ಟ ಹೊತ್ತಿಗೆಗಳಲ್ಲಿ ಪ್ರಕಾಶಪಡಿಸುವ ಕೆಲಸ ನಡೆದಿದೆ. ಸಾಹಿತ್ಯಾಭ್ಯಾಸಕ್ಕೆ ಅಗತ್ಯವಾದ ಅಂತಹ ಸಂಸ್ಕೃತಿಯ ಅಧಿಷ್ಠಾನಗಳಾದ ನಮ್ಮ ಜಗತ್ಪ್ರಸಿದ್ಧ ನಾಟಕಕಾರರ ಕೃತಿಗಳ ಕಥಾಸ್ವಾರಸ್ಯವನ್ನು ಈರೀತಿ ಪ್ರಕಟಿಸಮಾಡುವುದು ಸ್ತುತ್ಯ ಪ್ರಯತ್ನವೇಸರಿ. ಈ ಕಾರ್ಯದಲ್ಲಿ ಈ ಪುಸ್ತಕಬರೆದು ಜಯಶಾಲಿಗಳಾದ ಶ್ರೀ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು ಅಭಿನಂದನಾರ್ಹರು.

## ಚರಕಸಂಘದ ಹೊಸ ಹುರುಪು

ಅನುವಾದಕರು ಶ್ರೀ ರಾ. ಸಾವಕಾರ ಪ್ರಕಾಶಕರು ಶ್ರೀ ಪಡಿವಿ ದಾಮದಂಡ್ರಮಂತ್ರಿ, ಕರ್ನಾಟಕ ಚರಕ ಸಂಘ, ಪುಟಗಳು ೧೬೩; ಬೆಲೆ ರೂ ೧|

ಹಿಂದುಸ್ಥಾನದ ಸ್ವಾತಂತ್ರ್ಯ ಸಮರದಲ್ಲಿ ಖಾದಿಯಸ್ಥಾನ ವೇನೆಂಬುದು ಜಗದ್ವಿದಿತ. ಕರ್ನಾಟಕ ಚರಕ ಸಂಘದ ಇತಿಹಾಸ, ಕಾರ್ಯ ವೈವಿಧ್ಯ ಇವುಗಳೆಲ್ಲವೆ. ಖಾದಿಯ ಅಡಿಗಲ್ಲಿನಮೇಲೆ ನಿಂತ ಮಹಾತ್ಮರ ಸೂತ್ರಯಜ್ಞಾದಿ ಕಾರ್ಯಗಳ ಬಗ್ಗೆ ಸ್ಪಷ್ಟವಾಗಿ ಬೆಳಕು ಚೆಲ್ಲುವ ಈ ಗ್ರಂಥವು ಪ್ರಶ್ನೋತ್ತರ ಮಾಲಿಕೆಯಿಂದ ಕೂಡಿದ್ದು ಅಬಾಲವೃದ್ಧ ಗ್ರಾಹ್ಯವಾಗಿದೆ. ರಾಷ್ಟ್ರಪ್ರೇಮಿಗಳು ಇದನ್ನು ಆದರಿಸದಿರರು.

## ಚಿತ್ರಕಲಾ ಪ್ರವೇಶ

ಲೇಖಕರು, ಗೋಪಾಲ ಶ್ರೀನಿವಾಸರಾವ ಹುದ್ದಾರ ಬೆಳಗಾವಿ. ಪ್ರಕಾಶಕರು, ಡಾ. ಕಾಂತೇಶ ಕಮಲಾಪುರ ಗೌರವ ಕಾರ್ಯದರ್ಶಿ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ. ಬೆಲೆ ರೂ ೨. ಪುಟ ೯೨.

ಕನ್ನಡದಲ್ಲಿ ಈ ಬಗೆಯ ಪುಸ್ತಕಗಳು ಬಹಳ ವಿರಳ. ಈ ಪುಸ್ತಕ ಬರೆದು ಶ್ರೀ ಹುದ್ದಾರರು ಕನ್ನಡಕ್ಕಿದ್ದ ಒಂದು ದೊಡ್ಡ ಕೊರತೆಯನ್ನು ಅಣುಮಾತ್ರವಾದರೂ ಅಗಲಿ ತುಂಬಿದ್ದಾರೆ. ದೊಡ್ಡ ಗಾತ್ರದ ೯೨ ಪುಟಗಳ ಪುಸ್ತಕದಲ್ಲಿ ಅರ್ಧದಷ್ಟು ಪುಟಗಳನ್ನು ಪ್ರಸಂಗೋಚಿತವಾದ ಬಗೆಬಗೆಯ ಚಿತ್ರಗಳಿಂದ ಅಲಂಕರಿಸಿ ನಿರೂಪಣೆಯು ಸಾಧ್ಯವಿದ್ದಷ್ಟು ಸುಗಮವಾಗುವಂತೆ ಹೆಣಗಿದ್ದಾರೆ. ಈ ಪುಸ್ತಕವು ಪ್ರಾಥಮಿಕ ಶಾಲೆಯ ೬ ನೆಯ ೭ ನೆಯ ಇಯತ್ತೆಯ ಹುಡುಗರಿಗೋಸುಗ ಬರೆಯಲ್ಪಟ್ಟಿದ್ದರೂ ಚಿತ್ರಕಲೆ ಕಲಿಸುವ ಆ ಇಯತ್ತೆಯ ಶಿಕ್ಷಕರಿಗೂ ಕೂಡ ಉಪಯುಕ್ತವಾಗಿದೆ. ಹೆಜ್ಜೆ ಹೆಜ್ಜೆಗೂ ಎದುರಿಸಬೇಕಾಗುವ ಪಾರಿಭಾಷಿಕ ಶಬ್ದಗಳ ಗಂಡಾಂತರವನ್ನು ಲೇಖಕರು ತಕ್ಕಮಟ್ಟಿಗೆ ಯಶಸ್ವಿಯಾಗಿಯೇ ಎದುರಿಸಿ ಪಾರಾಗಿದ್ದಾರೆ. ಕನ್ನಡಿಗರುಕ್ಕೆ ಅಳವಿನಲ್ಲಿ ಸಿದ್ಧಸಾಮುಗ್ರಿ ಇಲ್ಲದಾಗ ತಮ ತಮಗೆ ತೋರಿದಂತೆ ಅದನ್ನು ಸಿದ್ಧಪಡಿಸಿಕೊಂಡೇ ಸಾಗಬೇಕಲ್ಲದೆ ಬೇರೆ ಹಾದಿಯೇ ಇಲ್ಲ. ಲೇಖಕರು ಕೊನೆಗೆ ತಾವು ಬಳಸಿದ ಎಲ್ಲ ಪಾರಿಭಾಷಿಕ ಶಬ್ದಗಳ ಪಟ್ಟಿಯನ್ನೂ ಜೊತೆಗೆ ಇಂಗ್ಲೀಷ ಪದಗಳನ್ನೂ ಕೊಟ್ಟಿದ್ದರೆ. ಇಂಗ್ಲೀಷ ಬಲ್ಲ ಓದುಗರಿಗೆ ಅದೆಷ್ಟೋ ಅನುಕೂಲವಾಗುತ್ತಿತ್ತು. ಲೇಖಕರು ಬಳಸಿದ ಭಾಷೆಗೆ ಒಳ್ಳೆಯ ಸಾಹಿತ್ಯದ ಸಂಸ್ಕಾರವಿದೆ. ವಿದ್ಯಾರ್ಥಿಗಳಷ್ಟೇ ಶಿಕ್ಷಕರಿಗೂ ಕಲಾಭಿರುಚಿಯುಳ್ಳ ರಸಿಕರಿಗೂ ಕ್ಷಣಕ್ಷಣಕ್ಕೂ ಕಸೂತಿಗಾಗಿ ಕುಸುರನ್ನೂ ಸುಳುವನ್ನೂ ಹುಡುಕುತ್ತ ತಡವರಿಸಿ ಅವರಿವರನ್ನು ಪೀಡಿಸುವ ಹೆಣ್ಣುಮಕ್ಕಳಿಗೂ ಈ ಪುಸ್ತಕ ಅತ್ಯುಪಯುಕ್ತವಾಗಿದೆ. ಮುದ್ರಣವಾದರೂ ಸಾಕಷ್ಟು ತೃಪ್ತಿಕರವಿದೆ. ಶ್ರೀ ಹುದ್ದಾರರು ಕನ್ನಡಿಗರ ಪ್ರೋತ್ಸಾಹಕ್ಕೆ ತುಂಬ ಅರ್ಹರು. ಅವರಿಂದ ಈ ಕಲೆಯ ಬಗೆ ಇನ್ನೂ ಅನೇಕ ಪುಸ್ತಕಗಳು ಹೊರಬರಲಿ.

## ಅ. ನ. ಕೃ.

ಬರೆದವರು ತ. ರಾ. ಸು.

ಪ್ರಕಾಶಕರು: ಸಾಹಿತ್ಯಾಲಯ ಚಿತ್ರದುರ್ಗ ಪುಟಗಳು ೨೧೪ ಬೆಲೆ ೩—೮—೦

ಅ. ನ. ಕೃಷ್ಣರಾಯರ ಕಥಾ ನಿರೂಪಣಕ್ಕೆ ಪಾತ್ರಪೋಷಣೆಗೆ, ನಾಟಕನೀತಿಗೆ, ಸಾಹಿತ್ಯ ನಿರ್ಮಿತಿಗೆ ಮಾರುಹೋಗಿ ಅವರ ಶಿಷ್ಯತ್ವ ವಹಿಸಿದ ತ. ರಾ. ಸುರವರು ಈ ಪುಸ್ತಕವನ್ನು ಬರೆದಿದ್ದಾರೆ. ಅ. ನ. ಕೃರವರನ್ನು ನಾಟಕಕಾರ, ಕಾದಂಬರಿಕಾರ, ಕತೆಗಾರ, ಪ್ರಗತಿಶೀಲ, ವಿಮರ್ಶಕ, ಕನ್ನಡಿಗ, ವ್ಯಕ್ತಿ ಎಂಬ ವಿವಿಧದೃಷ್ಟಿಕೋನದಿಂದಲೂ ನೋಡಲಾಗಿದೆ. ಅವರು ಸಾಹಿತ್ಯರಂಗದಲ್ಲಿ ಕಾಲಿಟ್ಟದ್ದು ನಾಟಕಕಾರರೆಂದು. ಸಮಾಜದ ಸಂಪ್ರದಾಯವಾದಿತ್ವವೇ ಅವರನ್ನು ಈ ಕ್ಷೇತ್ರಕ್ಕೆ ನೂಕಿದ್ದು. 'ಕನ್ನಡದಲ್ಲಿ ನಾಟಕಗಳ ಹೊಳೆಯನ್ನೇ ಹರಿಸಿಬಿಡುತ್ತೇನೆ.' ಎಂದು ಆಣೆಯ ಹಣ ತೊಟ್ಟಿದ್ದಾರಂತೆ.

ಕಾದಂಬರಿಕಾರ ಕೃಷ್ಣರಾಯರ ಚಿತ್ರವೂ ಸಾಕಷ್ಟು ಸ್ಪಷ್ಟವಾಗಿದೆ. ಅವರು ಬರೆದ ಎಲ್ಲ ಕಾದಂಬರಿಗಳಲ್ಲಿಯ ವ್ಯಕ್ತಿ ಸೃಷ್ಟಿ, ಪಾತ್ರಪೋಷಣೆಗಳು ಕಲಾತ್ಮಕ ದೃಷ್ಟಿಯಲ್ಲಿಯೂ ಚಲಿಸಲ್ಪಟ್ಟಿವೆ. 'ಜೀವನಯಾತ್ರೆ' ಯಿಂದ ಹೊರಟೊಂದು 'ನಟಸಾರ್ವಭೌಮ'ನ ವರೆಗೆ ಅವರ ಎಲ್ಲ ಕಾದಂಬರಿಗಳ ರಸಪಕ್ವ ವಿಮರ್ಶೆಯುಂಟು. ಲೇಖಕರು 'ಕನ್ನಡ ಕಾದಂಬರಿಗೊಬ್ಬರೇ ಕೃಷ್ಣರಾಯರು' ಎಂದು ತೆಗೆದ ಉದ್ಗಾರವು ಅಕ್ಷರಶಃ ಪಾಲಿಸಲ್ಪಡದಿದ್ದರೂ ಅದನ್ನು ಅತಿಶಯೋಕ್ತಿಯೆಂದು ಅಲ್ಲಗಳೆಯುವಂತಿಲ್ಲ.

ಇಂದಿನ ವರೆಗೆ ಸುಮಾರು ೫೦ ಸ್ವತಂತ್ರ ಕತೆಗಳನ್ನು ಬರೆದ ಕೃಷ್ಣರಾಯರ ಕಥಾನಿರೂಪಣೆಯನ್ನು ಒಂದು ಪ್ರಕರಣದಲ್ಲಿ ಒರೆಗಲ್ಲಿಗೆ ಹಚ್ಚಲಾಗಿದೆ. ಸಾಮಾನ್ಯ ಜನತೆಯು ಕಾಣುತ್ತಿರುವ ಸ್ವಾಭಾವಿಕ ಘಟನೆಗಳನ್ನು ಕಥಾರೂಪದಲ್ಲಿ ಹೆಣೆಯುವ ಕೃಷ್ಣರಾಯರ ಕೈಚಳಕವನ್ನು ಎತ್ತಿ ತೋರಿಸಲಾಗಿದೆ.

ಪ್ರಗತಿಶೀಲ ಮತ್ತು ವಿಮರ್ಶಕ ವಿಚಾರ ಪ್ರಣಾಲಿಯ ಕೃಷ್ಣರಾಯರ ಚಿತ್ರವು ಪುಸ್ತಕದ ತುಂಬೆಲ್ಲ ಹರಡಿದೆ. ಆದರೂ ಈ ಬಗ್ಗೆ ಬೇರೆ ಎರಡು ಪ್ರಕರಣಗಳನ್ನೇ ಮೀಸಲಾಗಿಟ್ಟು ಆ ಚಿತ್ರವನ್ನು ಓದುಗರ ಹೃದಯದ ಮೇಲೆ ಒತ್ತಿ ಮೂಡುವಂತೆ ಮಾಡಲಾಗಿದೆ.

ಎಂತಹ ಮಹಾಕಾವ್ಯಕ್ಕೂ ಮಲ್ಲಿನಾಥಿ ಅವಶ್ಯವೆಂಬಂತೆ ಅ. ನ. ಕೃ. ರವರ ವಿಶಾಲ, ವಿಶ್ವಮುಖ ಸಾಹಿತ್ಯದ ಅಂತರ್‌ದೃಷ್ಟಿ, ರಚನಾ-ಕುಶಲತೆ ಮತ್ತು ಧ್ಯೇಯದ ಮಹತ್ವಗಳು ಅರ್ಥವಾಗಬೇಕಾದರೆ ಈ ಪುಸ್ತಕವು ಅವಶ್ಯವೆಂದು ಹೇಳಬಹುದು. ತ. ರಾ. ಸು. ರವರ ಆಳವಾದ ಅಭ್ಯಾಸ, ವಿಮರ್ಶಕದೃಷ್ಟಿ, ಸುಂದರ ಶೈಲಿಗಳು ಪುಸ್ತಕಕ್ಕೆ ಇನ್ನೂ ಹೆಚ್ಚು ಕಳೆಗೊಟ್ಟಿವೆ. ಕನ್ನಡ ಸಾಹಿತ್ಯದಲ್ಲಿ ಈ ಸಾಹಿತ್ಯದ ಕೊರತೆ ಇನ್ನೂ ಬಹಳವಿದೆ.

## ಭಾರತೀಯ ವಿಜ್ಞಾನೋಪಾಸನೆ

ಬರೆದವರು ಶ್ರೀ ಪದ್ಮನಾಭ ಪುರಾಣಿಕ ಎಂ. ಎಸ್. ಸಿ. ಪ್ರಕಾಶಕರು ಕರ್ನಾಟಕ ಸಾಹಿತ್ಯಮಂದಿರ ಹೈದರಾಬಾದು-ದ. ಪುಟಗಳು: ೧೮೪; ಬೆಲೆ ರೂ. ೧||

ಇದು ಭಾರತೀಯರ ನಾಡಿನಲ್ಲಿ ವೈಜ್ಞಾನಿಕ ವಿದ್ಯೆಯು ಬೆಳೆದು ಬಂದುದನ್ನು ಪರಿಚಯ ಮಾಡಿಸುವ ಒಂದು ಸಿಂಹಾವಲೋಕನದಂತಿದೆ. ಪ್ರಾಚೀನ ಹಿಂದುಸ್ತಾನದಲ್ಲಿ ಗಣಿತಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ ರಸಾಯನಶಾಸ್ತ್ರ ಮುಂತಾದವು ಯಾವ ಮಟ್ಟದಲ್ಲಿದ್ದವು? ಎಲ್ಲಿಯವರೆಗೆ ನಮ್ಮ ಶಾಸ್ತ್ರಜ್ಞರು ತಮ್ಮ ಸಂಶೋಧನವನ್ನು ನಡೆಸಿದ್ದರು? ಎಂಬುದನ್ನಲ್ಲದೆ ಅರ್ವಾಚೀನ ಕಾಲದಲ್ಲಿ ಆಯಾ ಶಾಸ್ತ್ರಗಳು ಹೇಗೆ ಅಭಿವೃದ್ಧಿ ಹೊಂದುತ್ತಬಂದುವು ಎಂಬುದನ್ನು ಪ್ರಮಾಣಪೂರ್ವಕ ನಿರೂಪಿಸುವ ಪ್ರಸ್ತುತ ಗ್ರಂಥವು ಸರ್ವೋಪಯೋಗಿಯಾಗಿದೆ. ನಾವು ಇಂದಿನವರೆಗೆ ವಿಜ್ಞಾನ ಕ್ಷೇತ್ರದಲ್ಲಿ ಸಾಧಿಸಿದ್ದನ್ನು ತಿಳಿದುಕೊಂಡರೆ ಮುಂದಿನ ಕಾರ್ಯಕ್ಷೇತ್ರದ ಅಳತೆಯೂ ನಮಗೆ ಅಳವಡುವುದು. ಈ ದೃಷ್ಟಿಯಿಂದ ಶ್ರೀ ಪದ್ಮನಾಭ ಪುರಾಣಿಕರ ಪುಸ್ತಕ ಕನ್ನಡ ವಿಜ್ಞಾನಿಗಳಿಗೆ ಒಂದು ಚಿಕ್ಕ ಕೈಪಿಡಿಯಂತಿದೆ. ಆದುದರಿಂದ ಸರ್ವರೂ ಇದರ ಉಪಯೋಗವನ್ನು ಪಡೆಯುವದರಲ್ಲಿ ತಡಮಾಡಲಾರರೆಂದು ನಂಬಿಗೆ.

## ರಾಗ

ಬರೆದವರು ರಾಘವ. ಪ್ರಕಾಶಕರು: ಸತ್ಯಶೋಧನ ಪ್ರಕಟನ ಮಂದಿರ, ಕೋಟೆ ಬೆಂಗಳೂರನಗರ. ಪುಟಗಳು ೪೪. ಬೆಲೆ ೦—೧೨—೦

ನಲ್ಲಬ್ಬಗಳ ಸಂಕಲನವೊಂದನ್ನು ಶ್ರೀ ರಾಘವರು 'ರಾಗ' ರೂಪದಲ್ಲಿ ನೀಡಿದ್ದಾರೆ. ವಿರಹಿಯ ಕೊರಗಿನ ಕೂಗು ಕವನಗಳ ರೂಪಿನಲ್ಲಿ ಮೈವೆತ್ತು ನಿಂತಿದೆ. ಲೇಖಕರು ಬಿನ್ನಹದಲ್ಲಿ ಹೇಳಿದಂತೆ, "ಇಳೆಯ ಒಲವಿನ ಉದ್ಯಾನದಲ್ಲಿ ದಾರಿಗಳು ನೂರಾರು; ಆದರೆ ಬಹುಮಂದಿ ನಡೆದು ನಡೆದು ಆದ ದಾರಿ ಒಂದೇ: ದಾಂಪತ್ಯ ಪ್ರೇಮದ ಹೆದ್ದಾರಿ. ಉಳಿದುವು ನಡೆದದ್ದರಿಂದ ದಾರಿ: ನಡೆದಾರಿಯಲ್ಲ, ನಡೆದ ದಾರಿ. ಈ 'ರಾಗ' ಗೀತಗಳೆಲ್ಲ ಇಳೆಯಲ್ಲಿಯ ಪ್ರತಿಯೊಬ್ಬನೂ ಹಾಡಿದ ಹಾಡಲೇಬೇಕಾದ ಗೀತಗಳು. ಪ್ರತಿಯೊಬ್ಬರ ಹೃದಯ ವೀಣೆಗಳು ಈ 'ರಾಗ' ಕೃತಿಗೆ ಸಮರಸವಾಗಿ ಮಿಡಿಯಲೇಬೇಕು. ಅದು ಮಿರಿತವರ ಅನುಭವ ಅನನುಭವಿಕರ ಆಶೆ.

## ಪ್ರೇತ ಸಂಹಾರ

ಬರೆದವರು—ದಾಶರಥಿ ದೀಕ್ಷಿತ, ಬೆಲೆ ರೂ. ೧ ಪುಟ ೯೬

ಇದು ಹಾಸ್ಯಕತೆಗಳ ಸಂಗ್ರಹ. ಕತೆಗಳೆಂಬುದಕ್ಕಿಂತ ಚುಟುಕ ಎಂದರೆ ಲೇಸು. ಈ ತರದ ವಾಙ್ಮಯದ ಕೊರತೆ ಕನ್ನಡದಲ್ಲಿ ಹೆಚ್ಚಾಗಿರುವದು. ಇಂಥ ಸಂದರ್ಭದಲ್ಲಿ ಇವರ ಸಂಗ್ರಹಕ್ಕೆ ಸುಸ್ವಾಗತವು. ಮನ್ನಣೆಯ ಭಾಷಾದೃಷ್ಟಿಯಿಂದ ಏನೋ ಒಂದು ಕೊರತೆ ಎನಿಸುವದು. ಹರಕು ಹರಕು ಅನಿಸುವದು. ಅಂದ ಮಾತ್ರಕ್ಕೆ ತಿರಸ್ಕರಣೀಯವೆಂದು ಮಾತ್ರ ತಿಳಿಯ ಬಾರದು. ಇನ್ನೂ ಈ ದಿಸೆಯಲ್ಲಿ ಇವರ ಕೈ ಹೆಚ್ಚಾಗಿ ಪಳಗಬೇಕು. ಹಾಸ್ಯ ಸಾಹಿತ್ಯವನ್ನು ಬೆಳೆಯಿಸಬೇಕು.

## I too have spun

ಲೇಖಕರು: ಡಾ. ಪಟ್ಟಾಭಿ ಸೀತಾರಾಮಯ್ಯ ಪ್ರಕಾಶಕರು, ಹಿಂದ ಕಿತಾಬ್ಸ ಲಿಮಿಟೆಡ್ ಮುಂಬೈ ಬೆಲೆ ರೂ. ೧—೮-೦ ಪುಟಗಳು ೮೫.

ಡಾ. ಪಟ್ಟಾಭಿಯವರು ರಾಜಕಾರಣ ಪಟುಗಳಿದ್ದಂತೆ ನೂಲುವದರಲ್ಲಿಯೂ ಎತ್ತಿದಕೈ. ಇವರು ಅವಿಶ್ರಾಂತವಾಗಿ ನೂತದ್ದಕ್ಕೆ ಇತರ ಕೋಲನ[illegible] ಗುಣಪಡಿಸಲಾಗದ ನೋವುಂಟಾ[illegible]ಂತೆ: ನೂಲುವ ವಿಷಯವನ್ನು ಹಿಂಜಿ ಹಿಂಜಿ ಅದನ್ನೊಂದು ಗಂಭೀರ ಶಾಸ್ತ್ರವನ್ನಾಗಿ ಓದುಗರ ಮುಂದೆ ಮಂಡಿಸಿದ್ದಾರೆ. ನೂಲಲು ಕಲಿವವರಿಗೆ ಇವರ ಪುಸ್ತಕವು ಹೆಜ್ಜೆ ಹೆಜ್ಜೆಗೂ ದ್ವಾರಿತೊ ೯ರುವದು. ನೂಲಿನೊಡನೆ ಗುದುಮುರಿಗೆಹಾಕುವಾಗ ಎದುರಿಸಬೇಕಾದ ಪೇಚುಗಳನ್ನು ಹೇಗೆ ನೀಗಬಹುದೆಂಬುದಕ್ಕೆ ಸಮಯೋಚಿತ ಸಲಹೆಗಳೂ ಸಿಕ್ಕುವವು. ಶಾಲೆಯ ಹುಡುಗರಿಗಾಗಿ ಬರೆದ ಪಠ್ಯಪುಸ್ತಕದಂತೆ ವಿಷಯವೆಲ್ಲ ವಿವರವಾಗಿ ಸರಲವಾಗಿ ಸಿದ್ಧಾಂತವಾಗಿ ನಿರೂಪಿಸಲ್ಪಟ್ಟಿದೆ. ನಿರೂಪಣೆಯನೆಲ್ಲ ಸ್ವಾನುಭವದಿಂದ ಮಾಡಿದರಿಂದ ಓದಲು ಬೇಸರವಾಗುವದಿಲ್ಲ. ಪಟ್ಟಾಭಿಯವರ ಇಂಗ್ಲೀಷ ಭಾಷೆಯ ಸೊಗಸಿಗಾದರೂ ಓದುಗರು ಇದನ್ನೊಮ್ಮೆ ಅವಲೋಕಿಸತಕ್ಕದ್ದು.

## ಮಾನವನ ಬೇಟೆ

ಕೆಲವರ್ಷಗಳ ಹಿಂದೆ ಮೊದಲನೆಯ "ಹೆಲಿಕೋಪ್ಟರ್" ಕಾಣಿಸಿಕೊಂಡಾಗ ಲಂಡನ್ ಪತ್ರಿಕೆಯೊಂದು "ಈ ನಾಳೆಯ ಹಾರುವ ಯಂತ್ರಗಳು" ಸರ್ವೋದ್ದೇಶ ಸಾಧಕಗಳಾಗಿ ಉಪಯೋಗಕ್ಕೆಬರುವುವು — ಎಂದು ಹೇಳಿತ್ತು. ಆ ಮಾತನ್ನು ಹೇಳುವಾಗ ಪೋಲೀಸರ ಮನುಷ್ಯ ಮೃಗಯೆಯನ್ನು ದೃಷ್ಟಿಯಲ್ಲಿಟ್ಟುಕೊಳ್ಳಲಾಗಿತ್ತೋ ಇಲ್ಲವೋ ಹೇಳಬರುವುದಿಲ್ಲ.

ಅದು ಹೇಗಾದರೂ ಇರಲಿ, ಪಶ್ಚಿಮ ಭಾಗದ ಸಿಕೋರ್ಸ್ಕಿ ಹೆಲಿಕೊಪ್ಟರ್ ಒಂದನ್ನು ಬ್ರಿಟನ್ನಿನಲ್ಲಿ ಅಂತಹ ಕಾರ್ಯಕ್ಕೆ ಉಪಯೋಗಿಸಲಾಗಿದೆ. ಆ ಯಂತ್ರವು ಬಹಳ ಕೆಳಗೆ, ಮರಗಳ ತುದಿಯಲ್ಲಿ ಹಾರುತ್ತಿತ್ತು. ೧೫ ನಿಮಿಷಗಳಲ್ಲಿ ಅದರಲ್ಲಿದ್ದ ಇಬ್ಬರು ಅಧಿಕಾರಿಗಳು ಲಂಡನ್ನಿನ ವಿಸ್ತಾರವಾದ ಭಾಗವನ್ನು ಸೈನ್ಯತಂತ್ರ ದೃಷ್ಟಿಯಿಂದ ಪರೀಕ್ಷಿಸಿ ಬಂದರು; ನೆಲದ ಮೇಲೆ ನಡೆಯುತ್ತ ಆ ಕೆಲಸ ಮಾಡಬೇಕಾಗಿದ್ದರೆ ೫೦ ಆಳುಗಳು ಬಂದು ಇಡೀ ದಿನ ತಿರುಗಬೇಕಾಗಿತ್ತು.

ಈ ಪ್ರಥಮ ಪ್ರಯೋಗದಲ್ಲಿ ಜಯ ಲಭಿಸಿದ ನಂತರ ಪೋಲೀಸರಿಗೆ ಅಂತಹ ಒಂದೊಂದು ಹೆಲಿಕೊಪ್ಟರನ್ನು ಕೊಡಬೇಕೆಂದು ಅಧಿಕಾರಿಗಳು ಹೇಳಿದರು.

# ಸಂಪಾದಕೀಯ ಟೀಕಾಟಿಪ್ಪಣಿಗಳು

## ಕಳ್ಳನ ತಿರುಬೊಬ್ಬೆ

ಹಿಂದುಸ್ತಾನವನ್ನು ಎರಡು ತುಂಡುಮಾಡಿ ಬಿಡುವದರಿಂದ ಪರಿಸ್ಥಿತಿಯೆಲ್ಲ ಸುಧಾರಿಸಿ ದೇಶದಲ್ಲಿ ಶಾಂತಿ ನೆಲೆಯುವುದೆಂದು ಅನೇಕರು ಖಚಿತವಾಗಿ ಭಾವಿಸಿದ್ದರು. ಈಗ ಹಿಂದುಸ್ತಾನದಲ್ಲಿ ನಡೆದ ಘಟನೆಗಳನ್ನು ನೋಡಿದರೆ ಈ ಮಾತು ಸ್ಪಷ್ಟವಾಗುವುದು. ಕಾಶ್ಮೀರ ಹೈದ್ರಾಬಾದ ಸಮಸ್ಯೆಗಳು ತಲೆತಿನ್ನುತ್ತಿದ್ದು ಇಡೀ ದೇಶದ ಶಾಂತಿಗೆ ಭಂಗವನ್ನುಂಟುಮಾಡಿವೆ. ಕಾಶ್ಮೀರು ಹಿಂದುಸ್ತಾನದ ಒಕ್ಕೂಟವನ್ನು ಸೇರಬಯಸಿ ಅದರಂತೆ ಒಕ್ಕೂಟ ಸರಕಾರದೊಡನೆ ಒಡಂಬಡಿಕೆಮಾಡಿಕೊಂಡಿತು. ಆದರೆ ಇದರಿಂದ ಪಾಕಿಸ್ತಾನ ಸರಕಾರದ ಪಿತ್ತನೆತ್ತಿಗೇರಿದಂತಾಗಿ ಮೋಸ ವಂಚನೆ ಮೊದಲಾದ ಆರೋಪಗಳನ್ನು ಒಕ್ಕೂಟ ಸರಕಾರದ ಮೇಲೆ ಮಾಡಹತ್ತಿದೆ. ನಿಷ್ಪಕ್ಷಪಾತದಿಂದ ಘಟನೆಗಳನ್ನೆಲ್ಲ ವಿಮರ್ಶಿಸಿ ನೋಡಿದ್ದಾದರೆ, ಯಾರು ಮೋಸ ಮಾಡಿದರು, ಯಾರು ಆಕ್ರಮಣಶೀಲ ಧೋರಣವನ್ನು ವಹಿಸಿದರು, ದಾಳಿಗಾರರಿಗೆ ಪ್ರತ್ಯಕ್ಷ ಅಪ್ರತ್ಯಕ್ಷ ಪ್ರೋತ್ಸಾಹನೆ ಕೊಟ್ಟರೆಂದು ಮುಂತಾದ್ದು ಸ್ಪಷ್ಟವಾಗುವುದು. ಕಾಶ್ಮೀರದಲ್ಲಿ ಇಂದು ನಡೆದ ದಾಳಿಗಾರರ ದುಷ್ಕೃತ್ಯಗಳಿಗೆಲ್ಲ ಪಾಕಿಸ್ತಾನ ಸರಕಾರದ ಪ್ರತ್ಯಕ್ಷ ಅಪ್ರತ್ಯಕ್ಷ ಪ್ರೋತ್ಸಾಹವೇಯಿದೆಯೆಂದು ಪಂಡಿತ ಜವಾಹರಲಾಲರು ಆಕಾಶವಾಣಿಯಲ್ಲಿ ಮಾಡಿದ ಭಾಷಣದಿಂದ ಗೊತ್ತಾಗುವುದು. ಹೀಗಿದ್ದರೂ ಪಾಕಿಸ್ತಾನ ಸರಕಾರ ಕಳ್ಳನ ತಿರುಬೊಬ್ಬೆಯಂತೆ ಒಕ್ಕೂಟ ಸರಕಾರದ ಮೇಲೆಯೆ ಅಪಾದನೆ ಮಾಡಿದೆ. ಆದರೆ ಪಂಡಿತ ಜವಾಹರಲಾಲರು ಕೇಳಿದ ನೇರವಾದ ಪ್ರಶ್ನೆಗಳಿಗೆ ಪಾಕಿಸ್ತಾನ ಸರಕಾರವಿನ್ನೂ ಉತ್ತರ ಕೊಟ್ಟಿಲ್ಲ. ಪಾಕಿಸ್ತಾನದ ಗಡಿಗಳನ್ನು ದಾಟಿ ದಾಳಿಗಾರರು ಕಾಶ್ಮೀರದಲ್ಲಿ ಬಂದುದು ಹೇಗೆ ಮತ್ತು ಏಕೆ? ಅವರ ಹತ್ತಿರ ಅತ್ಯಾಧುನಿಕ ಶಸ್ತ್ರಾಸ್ತ್ರಗಳು ಎಲ್ಲಿಂದ ಬಂದವು? ಮತ್ತು ಅಂತಹ ದಾಳಿಗಾರರನ್ನು ದಂಡಿಸುವ ಶಕ್ತಿ ಪಾಕಿಸ್ತಾನ ಸರಕಾರದಲ್ಲಿ ಇದ್ದಿರಲಿಲ್ಲವೆ? ಇದ್ದರೂ ಇಂತಹ ದಾಳಿ ನಡೆಯಲೆಂಬ ಇಚ್ಛೆ ಇದ್ದಿತೆ? ವಾಯವ್ಯ ಸರಹದ್ದ ಪ್ರಾಂತ ಮತ್ತು ಪಶ್ಚಿಮ ಪಂಜಾಬದಿಂದ ದಾಳಿಗಾರರನ್ನು ದಂಡಿಸುವದು ಸರಕಾರಕ್ಕೆ ಶಕ್ಯವಿರಲಿಲ್ಲೆಂದು ಹೇಳುವದು ಎಂದಿಗೂ ಸಮಂಜಸವಾಗದು. ಈ ದಾಳಿಯ ಮುಖ್ಯಸ್ಥನೆಂದರೆ ಸರಹದ್ದದ ಮುಖ್ಯ ಮಂತ್ರಿಗಳ ಮಗ! ಅಂದ ಬಳಿಕ ಇದರ ಗುಟ್ಟು ಪಾಕಿಸ್ತಾನ ಸರಕಾರಕ್ಕೆ ಗೊತ್ತಿರಲಿಲ್ಲೆಂದು ಯಾರು ನಂಬಬೇಕು? ಜಿನ್ನಾರ ಆಪ್ತ ಕಾರ್ಯದರ್ಶಿ ಖುರ್ಷೀದರು ಇತ್ತೀಚೆ ಕಾಶ್ಮೀರದಲ್ಲಿ ನಡೆಸಿದ ಕಾಯಕವೂ ಪಾಕಿಸ್ತಾನ ಸರಕಾರದ ಧೋರಣದ ಮೇಲೆ ಬೆಳಕನ್ನು ಕೆಡಹುತ್ತದೆ. ಪಾಕಿಸ್ತಾನ ಸರಕಾರವು ಇವೆಲ್ಲ ಪ್ರಶ್ನೆಗಳನ್ನು ನಿರ್ವಿಕಾರ ಮನಸ್ಸಿನಿಂದ ವಿಚಾರಿಸಿ ತಪ್ಪನ್ನು ತಿದ್ದಿಕೊಳ್ಳದಿದ್ದರೆ ಪರಿಸ್ಥಿತಿ ಮತ್ತಷ್ಟು ಭೀಕರವಾಗಿ ಎರಡೂ ರಾಷ್ಟ್ರಗಳ ಸ್ನೇಹ ಸಂಬಂಧ ಕೆಡುವುದರಲ್ಲಿ ಸಂದೇಹವಿಲ್ಲ.

## ಹೈದರಾಬಾದದ ವಿಚಿತ್ರವರ್ತನೆ

ಹೈದರಾಬಾದ ನಿಜಾಮಸಾಹೇಬರ ವಿಚಿತ್ರ ಧೋರಣವೂ ಎರಡು ರಾಷ್ಟ್ರಗಳ ಶಾಂತಿ ಸ್ನೇಹ ಸಂಬಂಧಗಳಿಗೆ ಧಕ್ಕೆಯನ್ನು ತರುತ್ತಿದೆಯೆಂಬುದು ಸ್ಪಷ್ಟವಾಗಹತ್ತಿದೆ. ನಿಜಾಮಸಾಹೇಬರಿಗೆ ಪಾಕಿಸ್ತಾನ ಸರಕಾರದ ಪ್ರತ್ಯಕ್ಷ ಅಪ್ರತ್ಯಕ್ಷ ಬೆಂಬಲವಿರುವುದೆಂಬ ಸಂಶಯವೂ ಬರಹತ್ತಿದೆ. ಅಲ್ಲದೆ ಹೈದ್ರಾಬಾದದಲ್ಲಿ ಇರುವ ಮುಸ್ಲಿಮ ಮಜಲಿಸ ಇತ್ತಿಹಾದುಲ್ ಸಂಸ್ಥೆಯಂಥ ಪ್ರತಿಗಾಮಿ ಸಂಸ್ಥೆಯ ಬಲೆಯಲ್ಲಿ ನಿಜಾಮಸಾಹೇಬರು ಸಿಕ್ಕುಬಿದ್ದಿರುವರೆಂಬುದೂ ಅವರ ಧೋರಣದಿಂದ ಗೊತ್ತಾಗುವದು. ಇತ್ತೀಚೆ ಅವರು ಹಿಂದೀ ಒಕ್ಕೂಟ ಸರಕಾರದ ಕೂಡ ನಡೆಯಿಸಿದ ವಿಚಾರವಿನಿಮಯವನ್ನು ನೋಡಿದರೆ ಕಾಲವಿಲಂಬವೇ ಅವರ ಧೋರಣವೆಂಬುದು ಗೊತ್ತಾಗುವದು. ಇದರಿಂದ ಪರಿಸ್ಥಿತಿ ಸುಧಾರಿಸದೆ ಮತ್ತಿಷ್ಟು ಕೆಡುವುದೆಂಬುದು ಸ್ಪಷ್ಟವಾಗುವದು. ನಿಜಾಮ ಸರಕಾರದ ಅಧಿಕಾರಿಗಳು ನಡೆಯಿಸಿದ ಕಾರಸ್ಥಾನ ದಬ್ಬಾಳಿಕೆ ಮೊದಲಾದ ಸುದ್ದಿಗಳನ್ನು ನೋಡಿದರೆ ಏನೋ ಪೂರ್ವಸಿದ್ಧತೆ ನಡೆದಿದೆಯೆಂಬ ಸಂಶಯ ಬರುತ್ತಿದೆ. ಭೌಗೋಲಿಕ, ಐತಿಹಾಸಿಕ, ಪ್ರಜಾಸಂಬಂಧ ಮೊದಲಾದ ಎಲ್ಲ ದೃಷ್ಟಿಯಿಂದ ವಿಚಾರ ಮಾಡಿದರೂ ಹೈದ್ರಾಬಾದ ಸಂಸ್ಥಾನ ಹಿಂದೀ ಒಕ್ಕೂಟದಲ್ಲಿ ಸೇರಬೇಕಾದುದು ಅತ್ಯಂತ ನ್ಯಾಯ. ಅರಸರು ಮುಸಲ್ಮಾನರೆಂಬ ಒಂದೇ ಒಂದು ಕಾರಣದಿಂದ ಅದರ ಒಲವು ಪಾಕಿಸ್ತಾನದ ಕಡೆಗೆ ಇರುವುದು ಎಷ್ಟುಮಾತ್ರಕ್ಕೂ ಸರಿಯಾಗಲಾರದು.

## ಛತ್ರಪತಿಗಳೊಡನೆ ಚರ್ಚೆ

ಕೊಲ್ಹಾಪುರದ ಛತ್ರಪತಿಗಳು ಇನ್ನೂ ತಮ್ಮ ಪ್ರಜೆಗಳಿಗೆ ಹೊಣೆಗಾರ ಸರಕಾರವನ್ನು ಕೊಡದ್ದುದರಿಂದ ಅಲ್ಲಿಯೂ ಸತ್ಯಾಗ್ರಹ ಮೊದಲಾದ ಮಾತುಗಳು ಕೇಳಬರುತ್ತಿದ್ದುವು. ಆದರೆ ಕಳೆದ ವಾರ ಛತ್ರಪತಿಗಳು ಪ್ರಜಾ ಪರಿಷತ್ತಿನ ಪ್ರಮುಖರೊಡನೆ ಚರ್ಚೆ ನಡೆಸಿ ತಮ್ಮ ಕೊಡುಗೆಯನ್ನು ತಿಳಿಸಿರುವುದಾಗಿ ತಿಳಿಯುತ್ತದೆ. ಮೈಸೂರು ಮಹಾರಾಜರು ಸುಧಾರಣೆಗಳನ್ನು ಕೊಡುವ ಸಂಭವವಿದೆಯೆಂದು ತಿಳಿಯುತ್ತದೆ ಹೊಸ ಸುಧಾರಣೆಗಳ ಬಗೆಗೆ ಘಟನಾ ಸಮಿತಿಯನ್ನು ರಚಿಸಿ, ಅವರು ಒಪ್ಪಿರುವರೆಂದೂ ನಡುಗಾಲ ಸರಕಾರದಲ್ಲಿ ಪ್ರಜಾಪರಿಷತ್ತಿನ ನಾಲ್ವರು, ಸದ್ಯದ ಮೂವರು ಹಾಗು ದಿವಾಣರು ಹೀಗೆ ಎಂಟು ಜನರು ಇರುವರೆಂದೂ ತಿಳಿಯುತ್ತದೆ. ದಿವಾಣರು ಕಾದಿಟ್ಟ ವಿಷಯಗಳನ್ನು ವಹಿಸಿಕೊಂಡು ಮಂತ್ರಿಮಂಡಳದ ಚರ್ಚೆಯಲ್ಲಿ ಭಾಗವಹಿಸಿದರೂ ಅವರಿಗೆ ಮತಾಧಿಕಾರವಿರುವುದಿಲ್ಲೆಂದೂ ತಿಳಿಯುತ್ತದೆ. ಪ್ರಜೆಗಳನ್ನು ವಿಶ್ವಾಸದಲ್ಲಿ ತೆಗೆದುಕೊಂಡು ಮಹಾರಾಜರು ಆಡಳಿತ ಸಾಗಿಸಲು ಅಣಿಯಾದರೆ ಸಮಸ್ಯೆಗಳೆಲ್ಲ ತಾವೇ ಬಗೆಹರಿಯುವುವು. ಕೊಲ್ಹಾಪುರ ಸರಕಾರ ಹೇಗಾದರೂ ಹಿಂದೀ ಒಕ್ಕೂಟವನ್ನು ಸೇರಿ ಪರರಾಷ್ಟ್ರಸಂಬಂಧ ವಾಹನ ಸಂಪರ್ಕ ಮೊದಲಾದ ವಿಷಯಗಳಲ್ಲಿ ಆ ಸರಕಾರದ ಸಹಾಯವನ್ನು ಪಡೆವುದು. ಪ್ರಜೆಗಳಿಗೆ ಹೊಣೆಗಾರ ಸರಕಾರವನ್ನು ಕೊಟ್ಟು ಸಂಸ್ಥಾನದ ಸರ್ವಾಂಗಿಕ ಅಭಿವೃದ್ಧಿಯನ್ನು ಸಾಧಿಸುವದೆ ಅವರ ಗುರಿಯಾಗಿರತಕ್ಕದ್ದು. ಹಿಂದುಸ್ತಾನದಲ್ಲಿಯ ಆಯಾ ಮಹಾರಾಜರು ಮೈಸೂರಿನ ವಿಜಯೀ ಸತ್ಯಾಗ್ರಹದಿಂದಲಾದರೂ ಪಾಠ ಕಲಿತು ಪ್ರಜೆಗಳ ಆಸೆ ಆಕಾಂಕ್ಷೆಗಳನ್ನು ಪೂರೈಸುವರೆಂಬ ವಿಶ್ವಾಸವನ್ನು ತಾಳುತ್ತೇವೆ.

## ಮೈಸೂರಿನ ವಿಜಯೋತ್ಸವ

ಸತ್ಯಾಗ್ರಹ, ಸ್ವಾರ್ಥತ್ಯಾಗ, ಕಷ್ಟನಷ್ಟಗಳ ಪರಿಣಾಮವಾಗಿ ಮೈಸೂರು ಕಾಂಗ್ರೆಸ್ಸಿನವರು ಸಂಪಾದಿಸಿದ ವಿಜಯದ ಉತ್ಸವವನ್ನು ವಿಜಯದಶಮಿಯ ದಿನ ಇಡೀ ಸಂಸ್ಥಾನದಲ್ಲಿ ಅತ್ಯಂತ ವಿಜೃಂಭಣೆಯಿಂದ ಜರಗಿಸಲಾಯಿತು. ವಿಜಯಿಗಳಾದ ಕಾಂಗ್ರೆಸ ಪ್ರತಿನಿಧಿಗಳೆ ಅಧಿಕಾರ ಸೂತ್ರಗಳನ್ನು ವಹಿಸಿಕೊಂಡದ್ದರಿಂದ ಈ ಉತ್ಸವಕ್ಕೆ ಮತ್ತಷ್ಟು ಕಳೆಕಟ್ಟಿತೆಂಬುದನ್ನು ಬೇರೆ ಹೇಳಬೇಕಿಲ್ಲ. ಮಾದರಿ ಮೈಸೂರಿಗೆ ಭೂಷಣವಾಗುವ ರೀತಿಯಲ್ಲಿ ಈ ಉತ್ಸವವು ಸಾಂಗವಾಯಿತು. ಮುಖ್ಯ ಮಂತ್ರಿಗಳಾದ ಕೆ. ಚಂಗಲರಾಯರೆಡ್ಡಿಯವರು ಈ ಸಮಯದಲ್ಲಿ ಮೈಸೂರಿಗೆ ಕಳಿಸಿದ ಸಂದೇಶ ಅತ್ಯಂತ ಉಚಿತ ಮತ್ತು ಗೌರವಪೂರ್ಣವಾಗಿದೆ. ಜನಸೇವೆಯೆ ಈ ನಮ್ಮ ಹೊಸ ಸರಕಾರದ ಧ್ಯೇಯವಾಗಿದೆ. ಜನಸಾಮಾನ್ಯದ ಜೀವನ ಮಟ್ಟವನ್ನು ಎತ್ತರಿಸುವದೆ ನಮ್ಮ ಗುರಿ. ಆಹಾರ ಪರಿಸ್ಥಿತಿಯನ್ನು ಸುಧಾರಿಸುವದು, ಕಳ್ಳಪೇಟೆ, ಲಂಚಗುಳಿತನವನ್ನು ನಿರ್ಮೂಲಗೊಳಿಸುವದು ಸರಕಾರದ ಧೋರಣ. ಜಾತೀಯ ಸೌಹಾರ್ದವನ್ನೂ ಕಾಪಾಡಿಕೊಂಡು ಹೋಗಲಾಗುವದು ಎಂದು ಮುಂತಾಗಿ ಮುಖ್ಯ ಮಂತ್ರಿಗಳು ಆಶ್ವಾಸಿಸಿದ್ದಾರೆ. ಮೈಸೂರಿನ ಈ ಸ್ವಾತಂತ್ರ್ಯದಿಂದ ಕನ್ನಡಿಗರಲ್ಲಿ ಮಹಾ ಕರ್ನಾಟಕ ಪ್ರಾಂತದ ರಚನೆಯ ಆಕಾಂಕ್ಷೆ ಹೆಚ್ಚಿದೆ. ಮೈಸೂರನ್ನೊಳಗೊಂಡ ಇಡೀ ಕನ್ನಡನಾಡಿನ ಏಕತಂತ್ರ ಸರಕಾರದ ಸ್ಥಾಪನೆಗಾಗಿ ಜನ ಆತುರವಾಗಿದೆ. ಇದಕ್ಕೆ ಅನುಕೂಲವಾಗುವಂತೆ ಮೈಸೂರಿನ ಕಾಯಿದೆ ಹಾಗು ಕೂಲಿಕಾರ ಮಂತ್ರಿಗಳಾದ ಶ್ರೀ ಕೆ. ಟಿ. ಭಾಷ್ಯಂರು ಬೆಂಗಳೂರಿನ ವಿಜಯೋತ್ಸವ ಸಭೆಯಲ್ಲಿ ಆಶ್ವಾಸನಕೊಟ್ಟಿದ್ದಾರೆ. ಮಹಾ ಕರ್ನಾಟಕ ನಿರ್ಮಾಣ ಸಮಸ್ಯೆಯು ಮಂತ್ರಿಮಂಡಳದ ಮುಂದಿನ ಮೊದಲನೆಯ ವಿಷಯವಾಗಿರುವದೆಂದು ಅವರು ಆಶ್ವಾಸ ಕೊಡಿಸಿರುವರು. ಒಕ್ಕೂಟ ಸರಕಾರದ ಅಧೀನದಲ್ಲಿರುವ ಕನ್ನಡಿಗರೂ ಅಖಂಡ ಕರ್ನಾಟಕ ಪ್ರಾಂತದ ನಿರ್ಮಾಣದ ಬಗ್ಗೆ ಆತುರರಾಗಿರುವರು. ಮೈಸೂರಿನಲ್ಲಿ ಹೊಣೆಗಾರ ಸರಕಾರ ಸ್ಥಾಪಿತವಾದ್ದರಿಂದ ಈ ಪ್ರಶ್ನೆ ಮತ್ತಷ್ಟು ಸುಲಭವಾಗಿದೆ. ಮೈಸೂರ ಸರಕಾರವು ಈ ದಿಸೆಯಲ್ಲಿ ಮುನ್ನಡೆದು ಕನ್ನಡಿಗರ ಬಹು ದಿನದ ಆಸೆಯನ್ನು ಸಫಲಗೊಳಿಸುವರೆಂದು ಆಶಿಸೋಣ.

## ಮುಂಬಯಿ ಶಾಸನಸಭೆ

ಮುಂಬಯಿ ಶಾಸನಸಭೆಯಲ್ಲಿ ಕಳೆದ ವಾರ ಮಹತ್ವದ ಮಸೂದೆಗಳು ಮಂಡಿಸಲ್ಪಟ್ಟು ಚರ್ಚಿಸಲ್ಪಡಹತ್ತಿವೆ. ಪ್ರಾಥಮಿಕ ಶಿಕ್ಷಣ ಕಾಯಿದೆಯಲ್ಲಿ ಮಹತ್ವದ ತಿದ್ದುಪಡಿಯಾಗಿ ಸ್ಕೂಲಬೋರ್ಡುಗಳ ಅಧಿಕಾರಗಳನ್ನು ಮಿತಗೊಳಿಸಲಾಯಿತು. ಸ್ಕೂಲಬೋರ್ಡುಗಳ ಅಯಶಸ್ವಿ ಆಡಳಿತವನ್ನು ನೆನೆದರೆ ಈ ತಿದ್ದುಪಡಿ ಈ ಮೊದಲೆ ಮಾಡಬೇಕಿತ್ತೆಂದು ಹೇಳಬಹುದಾಗಿದೆ. ಸದ್ಯದ ತಿದ್ದುಪಡಿಯೂ ಉದ್ದಿಷ್ಟವನ್ನು ಪೂರ್ಣ ಸಾಧಿಸಲಾರದು. ಆದರೂ ಮುಖ್ಯ ಮಂತ್ರಿಗಳು ಇದರಲ್ಲಿ ಮುಂದಡಿಯಿಟ್ಟು ಶಾಸನ ಸಭೆಯ ಒಪ್ಪಿಗೆಯನ್ನು ಪಡೆದುದು ಅಭಿನಂದನೀಯವಾಗಿದೆ. ಪುಣೆ ವಿಶ್ವವಿದ್ಯಾಲಯ ಸ್ಥಾಪನೆಯ ಮಸೂದೆಯನ್ನೂ ಮಾನ್ಯ ಶಿಕ್ಷಣ ಮಂತ್ರಿಗಳು ಮಂಡಿಸಿ ಅದರ ಮೊದಲನೆಯ ವಾಚನವನ್ನು ಪಾಸುಮಾಡಿಕೊಂಡರು. ಅದೀಗ ಪರಿಶೀಲಕ ಸಮಿತಿಗೆ ಒಪ್ಪಿಸಲ್ಪಟ್ಟಿದೆ. ಹೊಸದಾಗಿ ಸ್ಥಾಪಿತವಾಗುವ ವಿಶ್ವವಿದ್ಯಾಲಯಗಳ ಸ್ವರೂಪವೆಂತಹದಿರಬೇಕು, ಅವುಗಳ ಬೋಧಭಾಷೆಯಾವುದಿರಬೇಕು, ಆಯಾ ವಿಶ್ವವಿದ್ಯಾಲಯಗಳಲ್ಲಿ ಸಂಬಂಧವೆಂತಿರಬೇಕು ಪ್ರಾದೇಶಿಕ ವಿಶ್ವವಿದ್ಯಾಲಯಗಳಿರಬೇಕೋ ಬೇಡವೋ ಮೊದಲಾದ ವಿಷಯಗಳೆಲ್ಲ ಮಹತ್ವದವಾಗಿದ್ದು ಪರಿಶೀಲಕ ಸಮಿತಿಯಲ್ಲಿ ಇವೆಲ್ಲವುಗಳ ವಿಚಾರವಾಗಿ ತಿದ್ದುಪಡಿ ಹೊಂದಿದ ರೂಪದಲ್ಲಿ ಮಸೂದೆ ಶಾಸನ ಸಭೆಯ ಮುಂದೆ ಬಂದು ಪೂರ್ಣ ಚರ್ಚೆಯ ನಂತರ ಸ್ವೀಕೃತವಾಗುವದೆಂದು ನಂಬಲಾಗಿದೆ. ಪ್ರಾದೇಶಿಕ ವಿಶ್ವವಿದ್ಯಾಲಯವನ್ನು ಪಡೆವಲ್ಲಿ ಮಹಾರಾಷ್ಟ್ರವೆ ಮುಂದಾಗಿದ್ದು ಇನ್ನು ಕರ್ನಾಟಕ ಮತ್ತು ಗುಜರಾಥಗಳು ಅದನ್ನು ಅನುಸರಿಸಲಿವೆ. ಇವಕ್ಕೂ ಮಹತ್ವದ್ದಾದ ಮತ್ತೊಂದು ಮಸೂದೆಯು ಮಂಡಿತವಾಗಿ ಅದರ ಪ್ರಥಮ ವಾಚನ ಕೂಡ ಸ್ವೀಕೃತವಾಯಿತು. ಪ್ರತ್ಯೇಕ ಮತದಾರ ಸಂಘಗಳನ್ನು ರದ್ದುಪಡಿಸುವದೆ ಆ ಮಸೂದೆಯು. ಬ್ರಿಟಿಶ ಸರಕಾರದವರು ಹಿಂದುಸ್ತಾನಕ್ಕೆ ಮಾಡಿದ ಅಹಿತಗಳಲ್ಲಿ ಪ್ರತ್ಯೇಕ ಮತದಾರ ಸಂಘಗಳನ್ನು ಏರ್ಪಡಿಸಿದ್ದು ಅತ್ಯಂತ ಹಾನಿಕರವಾದುದು. ಹಿಂದುಸ್ತಾನವನ್ನು ತುಂಡರಿಸಲಿಕ್ಕೆ ಈ ಪ್ರತ್ಯೇಕ ಮತದಾರ ಸಂಘ ಪದ್ಧತಿಯೇ ಕಾರಣವೆಂದು ಹೇಳಿದರೆ ತಪ್ಪಾಗದು. ಅಂದು ಬಿತ್ತಿದ ಈ ಪ್ರತ್ಯೇಕತೆಯ ವಿಷಬೀಜವು ಇಂದು ಹೆಮ್ಮರವಾಗಿ ದ್ವಿರಾಷ್ಟ್ರತತ್ವಕ್ಕೆ ಅವಕಾಶ ಕೊಟ್ಟು ಇಡೀ ರಾಷ್ಟ್ರವನ್ನೇ ತುಂಡರಿಸಿಬಿಟ್ಟಿತು!! ಇಂಥ ಅನಿಷ್ಟ ಪ್ರಕಾರವನ್ನು ರದ್ದುಪಡಿಸಲು ಸ್ವತಂತ್ರ ಸರಕಾರ ಮುಂದಾದುದು ಆಶ್ಚರ್ಯವನ್ನುಂಟು ಮಾಡಲಾರದು. ಮುಸಲ್ಮಾನ ಸದಸ್ಯರೂ ಈ ಮಸೂದೆಗೆ ಒಪ್ಪಿಗೆಯನ್ನು ಕೊಟ್ಟದ್ದಲ್ಲದೆ ತಮಗಾಗಿ ಕಾದಿಡುವ ಸ್ಥಳಗಳು ಕೂಡ ಅನವಶ್ಯವೆಂದು ಅಭಿಪ್ರಾಯಪಟ್ಟರು!! ಈ ಮಸೂದೆ ಸ್ವೀಕೃತವಾಗಿ ಹಿಂದೂ ಮುಸಲ್ಮಾನರು ಬಾಂಧವರಂತೆ ಇರಲು ಅವಕಾಶವುಂಟಾಗಲೆಂದು ಆಶಿಸುವಾ. ಬಾಡಿಗೆ ನಿಯಂತ್ರಣ ಮಸೂದೆಯೂ ಸ್ವೀಕೃತವಾಯಿತು. ವಾಯದೆ ವ್ಯವಹಾರ ನಿಯಂತ್ರಣ ಮೊದಲಾದ ಮಸೂದೆಗಳೀಗ ಚರ್ಚಿಸಲ್ಪಡಹತ್ತಿವೆ.

## ಕುಡುಕತನ ಅಪರಾಧ

ಕುಡುಕತನವನ್ನು ನಿರ್ಮೂಲ ಗೊಳಿಸುವಲ್ಲಿ ಮದ್ರಾಸ ಸರಕಾರವು ಬೇರೆ ಎಲ್ಲ ಪ್ರಾಂತಗಳಿಗಿಂತ ಮುನ್ನಡೆಯಹತ್ತಿದೆ. ಈಗಾಗಲೆ ಎಂಟು ಜಿಲ್ಲೆಗಳಲ್ಲಿ ಮದ್ಯಪಾನ ಪ್ರತಿಬಂಧ ಕಾಯಿದೆಯನ್ನು ಜಾರಿಯಲ್ಲಿ ತಂದುದಲ್ಲದೆ ಕುಡುಕತನವನ್ನು ಅಪರಾಧವೆಂದು ಭಾವಿಸಬೇಕೆಂಬ ಮಸೂದೆಯನ್ನು ಸ್ವೀಕರಿಸಲಾಗಿದೆ. ಕುಡುಕತನಕ್ಕೆ ೬ ತಿಂಗಳ ಶಿಕ್ಷೆ ಮತ್ತು ಒಂದು ಸಾವಿರ ರೂಪಾಯಿ ದಂಡವನ್ನು ವಿಧಿಸಬೇಕೆಂಬದಾಗಿ ಮಸೂದೆ ಪಾಸಾಯಿತು. ಪಾನ ನಿರೋಧವನ್ನು ಪ್ರಾರಂಭಿಸಿದ ಅಂದಿನಿಂದ ಗ್ರಾಮೋದ್ಯೋಗಗಳ ಪ್ರಚಾರ ಕೈಕೊಂಡ ಪ್ರದೇಶಗಳಲ್ಲಿ ವಿದೇಶಿ ಸರಾಯಿ ಸಂಗ್ರಹಿಸುವದನ್ನು ಪ್ರತಿಬಂಧಿಸುವ ಮಸೂದೆಯನ್ನು ಶಾಸನಸಭೆ ಸ್ವೀಕರಿಸಿದೆ. ಮದ್ರಾಸ ಸರಕಾರದ ಈ ಮುನ್ನಡೆಯು ನಿಜವಾಗಿ ಅಭಿನಂದನೀಯವಾಗಿದೆ. ಜನಸಾಮಾನ್ಯರು ಪ್ರಜೆಗಳ ವಿತ್ತ ಜೀವಿತಗಳನ್ನು ಸಂರಕ್ಷಿಸುವವರು ಮದ್ರಾಸ ಸರಕಾರವು ... ವುದೆಂಬುದು ಅನುಭವದ ಮಾತು. ಅದರ ಮೇಲೆ ಭಾರೀ ಕರವನ್ನು ಹೇರಿ ನಿಯಂತ್ರಿಸಬೇಕೆಂದು ಮದ್ರಾಸ ಸರಕಾರವು ಕರವನ್ನು ಇಮ್ಮಡಿ ಮಾಡುವ ಮಸೂದೆಗೆ ಶಾಸನಸಭೆಯ ಒಪ್ಪಿಗೆಯನ್ನು ಪಡೆದುಕೊಂಡಿತು. ಈ ಕರವನ್ನು ಸೇರಿಕೆ ಆರೂವರೆ ಕೋಟಿ ರೂಪಾಯಿ ಉತ್ಪನ್ನ ಹೆಚ್ಚುವದು. ಪಾನನಿರೋಧ ಕಾಯಿದೆಯಿಂದ ಉಂಟಾದ ಹಾನಿಯನ್ನು ತುಂಬಿಕೊಳ್ಳಲು ಈ ಕರವನ್ನು ಏರಿಸಲಾಗಿದೆಂದು ಹೇಳಲಾಗಿದೆ. ಆದರೆ ಬೇರೆ ಯಾವ ಮಾರ್ಗದಿಂದಲೂ ಉತ್ಪನ್ನ ಹೆಚ್ಚಿಸಲು ಸರಕಾರ ಸಾಧ್ಯವಿಲ್ಲವೆ ... ಕರವನ್ನು ಏರಿಸಬಾರದೆಂದು ಮುಂಗಳೂರಿನ ಮಾನ್ಯ ಕಾರಂತರು ತಿದ್ದುಪಡಿ ಸೂಚಿಸಿದ್ದರು. ಆದರೆ ಹಿಂದುಗಡೆ ಅದನ್ನು ಹಿಂತೆಗೆದುಕೊಂಡರು. ಜಮೀನದಾರಿ ನಿರ್ಮೂಲನದಲ್ಲಿಯೂ ಮದ್ರಾಸ ಸರಕಾರ ಮುನ್ನಡೆಯಹತ್ತಿದೆ. ಮಂತ್ರಿ ಮಂಡಳದಲ್ಲಿಯ ಬಿಕ್ಕಟ್ಟನ್ನು ಬಿಟ್ಟು ಗೊಟ್ಟರೆ ಉಳಿದ ಎಲ್ಲ ವಿಷಯಗಳಲ್ಲಿಯೂ ಮದ್ರಾಸ ಸರಕಾರ ಬೇರೆ ಪ್ರಾಂತಗಳಿಗಿಂತ ಮುಂದೆ ಇದೆಯೆಂಬುದು ಹೆಮ್ಮೆಯ ವಿಷಯ. ಮಂತ್ರಿಮಂಡಳದಲ್ಲಿಯ ಮತಭೇದಗಳೂ ಬೇಗ ಮಾಯವಾಗಿ ಮದ್ರಾಸ ಮಂತ್ರಿ ಮಂಡಳವು ಅತ್ಯಂತ ಪ್ರಬಲ ನಾಯಸಿದ್ಧರ, ನಿಷ್ಪಕ್ಷಪಾತ ವರ್ತನೆಯಿಂದ ಸರ್ವಾಂಗಿಕ ಉನ್ನತಿಯನ್ನು ಸಾಧಿಸಲೆಂದು ಹಾರಯಿಸುತ್ತೇವೆ.

## ಪಾಕಿಸ್ತಾನದ ಒಪ್ಪಂದಭಂಗ

ಹಿಂದುಸ್ತಾನದ ವಿಭಜನೆಯಾಗುವಾಗ ಹಿಂದುಸ್ತಾನ ಪಾಕಿಸ್ತಾನಗಳ ರಕ್ಷಣೆಗಾಗಿ ಸಂಯುಕ್ತ ಸಂರಕ್ಷಣ ಮಂಡಳವನ್ನು ನಿಯಮಿಸಿದ ಬಳಿಕ ಸದ್ಯಕ್ಕೆ ಎರಡೂ ರಾಷ್ಟ್ರಗಳು ತಮ್ಮ ಬಲಗಳನ್ನು ಹೆಚ್ಚಿಸಬಾರದೆಂದೂ ಗೊತ್ತಾಗಿದ್ದಿತಂತೆ. ಈ ಸಂರಕ್ಷಕ ಮಂಡಳದ ಸಭೆ ಆಗಾಗ ಸೇರಿ ಪರಿಸ್ಥಿತಿಯ ವಿಚಾರವನ್ನು ಮಾಡುತ್ತಿದೆ. ಆದರೆ ಪಾಕಿಸ್ತಾನದ ಗಡಿಸೈನಿಕರು ಸಂರಕ್ಷಣ ಮಂಡಳದ ನಿಯಮ ನಿಬಂಧನೆಗಳನ್ನು ಮುರಿದು ಗಡಿಪ್ರದೇಶಗಳಲ್ಲಿ ಗೊಂದಲ ಹಾಕುತ್ತಿರುವ ಸುದ್ದಿ ಆಗಾಗ ಪ್ರಸಿದ್ಧವಾಗುತ್ತಿವೆ ಈ ಸುದ್ದಿಗಳನ್ನು ಪಾಕಿಸ್ತಾನ ಸರಕಾರದವರು ಹಾರಿಸಿಕೊಂಡರೂ ಕಾಶ್ಮೀರದ ಮೇಲೆ ನಡೆದ ದಾಳಿಯಲ್ಲಿ ಪಾಕಿಸ್ತಾನದ ಸೇನಾಧಿಕಾರಿಗಳೇ ಇರುವರೆಂಬುದನ್ನು ಅವರು ಅಲ್ಲಗಳೆಯುವಂತಿಲ್ಲ. ಈ ಸಂಬಂಧದಲ್ಲಿ ಕಾಶ್ಮೀರ ಸರಕಾರವು ಪ್ರಕಟನೆಯನ್ನು ಹೊರಡಿಸಿ ಈ ದಾಳಿಗಾರರಲ್ಲಿ ಪಾಕಿಸ್ತಾನದ ಕೆಲವು ಸೇನಾಧಿಕಾರಿಗಳಿದ್ದು ಅವರು ಕೊಲೆಸುಲಿಗೆ ನಡೆಸಿದ ಹಾಗು ಸ್ತ್ರೀಯರನ್ನು ಅಪಹರಿಸಿದ ಉದಾಹರಣೆಗಳಿವೆಯೆಂದು ಸಾರಿದೆ. ಪರಿಸ್ಥಿತಿ ಹೀಗಿದ್ದರೂ ಪಾಕಿಸ್ತಾನ ಸರಕಾರವು ಈ ದಾಳಿಯೆಲ್ಲ ಗುಡ್ಡಗಾಡ ಜನರ ಕೈವಾಡವೆಂದು ಪ್ರಚಾರ ನಡೆಸಿದೆ. ಇದೆಲ್ಲಕ್ಕೂ ಕಳಸವಿಟ್ಟಂತೆ ಪಾಕಿಸ್ತಾನದ ಗವರ್ನರ ಜನರಲ್‌ರಾದ ಬ್ಯಾ. ಜಿನ್ನಾಸಾಹೇಬರು ಆರ್ಡಿನನ್ಸೊಂದನ್ನು ಹೊರಡಿಸಿ ಮುಸಲ್ಮಾನ ನ್ಯಾಶನಲ್ ಗಾರ್ಡರನ್ನು ಸಂಘಟಿಸಲು ವಿಧಿಸಿದ್ದಾರೆ. ಪರಸ್ಪರರು ಬಲಗಳನ್ನು ಸದ್ಯಕ್ಕೆ ಬೆಳೆಸಬಾರದೆಂದು ಒಡಂಬಡಿಕೆಯಾಗಿದ್ದನ್ನು ಲೆಕ್ಕಿಸದೆ ಪಾಕಿಸ್ತಾನ ಸರಕಾರವು ಈ ರೀತಿ ನ್ಯಾಶನಲ್ ಗಾರ್ಡರ ಸಂಘಟನೆಗೊಳಿಸಿದ್ದು ಪ್ರತ್ಯಕ್ಷ ಒಪ್ಪಂದ ಭಂಗವೇ ಎಂದು ಹೇಳಲಬ್ಯಂತರವಿಲ್ಲ. ಏನಾದರೊಂದು ಕುಂಟ ನೆವಮಾಡಿ ಮುಂದೆ ಪಾಕಿಸ್ತಾನ ಸರಕಾರವು ಇದನ್ನು ಸಮರ್ಥಿಸಿಕೊಳ್ಳಬಹುದು. ಆದರೆ ಹಾಗೆ ಮಾಡುವದು ಕೇವಲ ವಕೀಲಿಯ ಪಾಂಡಿತ್ಯವೆಂದು ಹೇಳಬೇಕಾಗುವದು. ಪಾಕಿಸ್ತಾನ ಸರಕಾರವು ಈ ರೀತಿ ಒಪ್ಪಂದಭಂಗ ಮಾಡುತ್ತ ಹೋದರೆ ಎರಡೂ ರಾಷ್ಟ್ರಗಳಲ್ಲಿ ಶಾಂತಿ, ಸೌಹಾರ್ದ ಉಳಿಯುವದೆಂತು? ಪಾಕಿಸ್ತಾನ ಸರಕಾರವು ನಿರ್ವಿಕಾರ ಮನಸ್ಸಿನಿಂದ ಪರಿಸ್ಥಿತಿಯ ವಿಚಾರ ಮಾಡಿ ಎರಡೂ ರಾಷ್ಟ್ರಗಳ ಶಾಂತಿಗೆ ಭಂಗವುಂಟಾಗುವಂತಹ ಯಾವ ಧೋರಣವನ್ನೂ ಸ್ವೀಕರಿಸಬಾರದೆಂದು ಅಪೇಕ್ಷಿಸುತ್ತೇವೆ.

## ಶೇಖ ಅಬ್ದುಲ್ಲಾರ ಗರ್ಜನೆ

ಕಾಶ್ಮೀರದ ಮುಖ್ಯ ಮಂತ್ರಿಗಳಾಗಿ ನಿಯಮಿಸಲ್ಪಟ್ಟ ಶೇಖ ಅಬ್ದುಲ್ಲಾರವರು ಸದ್ಯದ ಪರಿಸ್ಥಿತಿಯನ್ನು ವಿಮರ್ಶಿಸುತ್ತ ಸದ್ಯದಲ್ಲಿ ಹಿಂದುಸ್ತಾನ ಹಾಗೂ ಪಾಕಿಸ್ತಾನಗಳ ನಡುವೆ ಯುದ್ಧವೆ ಸುರುವಾದರೆ ಕಾಶ್ಮೀರ ರಣರಂಗದಲ್ಲಿ ಪಾಕಿಸ್ತಾನದ ಸಮಾಧಿಯಾಗುವದು ಖಚಿತ. ಎಂದು ಅಭಿಪ್ರಾಯಪಟ್ಟಿದ್ದಾರೆ. ಪಾಕಿಸ್ತಾನವು ಆಂತರಿಕ ತೊಡಕುಗಳನ್ನು ಬಿಡಿಸಲು ಅಸಮರ್ಥವಾದ್ದರಿಂದಲೆ ಕಾಶ್ಮೀರದ ಮೇಲೆ ದಾಳಿ ಪ್ರಾರಂಭವಾಗಿದೆ. ಒಸ್ತಾಯದ ಆಂತರಿಕ ಸಮಸ್ಯೆಗಳಿಂದ ಪಾಕಿಸ್ತಾನ ಜನರ ಲಕ್ಷ್ಯವನ್ನು ಬೇರೆ ಕಡೆಗೆ

—೧೪ನೇ ಪುಟಕ್ಕೆ

# ಭರತಖಂಡದಲ್ಲಿಯ ದುರ್ನಡತೆಯ ಸಂಸ್ಕಾರಗಳು

## ಕಾಶ್ಮೀರದಲ್ಲಿ ಪಾಕಿಸ್ತಾನಿಗಳ ಪುಂಡಾಟಿಕೆ— ಹಿಂದೀ ಸೈನಿಕರ ಸಾಹಸ— ಹೈದರಾಬಾದಿನಲ್ಲಿ ಹೆಣದಿನಿಗಳ ನೃತ್ಯ— ಶ್ಯಾಮಲದಾಸ ಗಾಂಧಿಯವರ ಪ್ರತಾಪ—

### ಕಾಶ್ಮೀರದ ಕಾಳಗ

ಕಳೆದ ೨ ನೆಯ ತಾರೀಕಿನಲ್ಲಿ ಹೊಸದಿಲ್ಲಿಯ ಆಕಾಶವಾಣಿಯಿಂದ ಮಾತಾಡುತ್ತ ಹಿಂದುಸ್ತಾನ ಮುಖ್ಯ ಪ್ರಧಾನರಾದ ಪಂಡಿತ ಜವಾಹರಲಾಲರು ಕಾಶ್ಮೀರದಲ್ಲಿ ಹೇಗೆ ಗಂಡಾಂತರ ಉಂಟಾಯಿತು, ಯಾರಿಂದ ಉಂಟಾಯಿತು, ಯಾವಾಗ ಎಂಬುದನ್ನಲ್ಲದೆ ತತ್ಪರಿಣಾಮವಾಗಿ ಹಿಂದುಸ್ತಾನ ಸರಕಾರವು ಯಾವ ಕರಾರಿನಮೇರೆಗೆ ಕಾಶ್ಮೀರದ ಶಾಂತಿ ಸುವ್ಯವಸ್ಥೆಗಳನ್ನು ಕಾಪಾಡಲು ದಂಡನ್ನು ಕಳುಹಿ ಕೃತಕೃತ್ಯವಾಯಿತೆಂಬುದನ್ನೂ ವಿವರಿಸಿದ್ದನ್ನು ಮುಖಪತ್ರದಲ್ಲೇ ಕೊಡಲಾಗಿದೆ. ಅದರಲ್ಲಿ ಪಂಡಿತರು ಪಾಕಿಸ್ತಾನಕ್ಕೆ ಹೀಗೆ ಆಹ್ವಾನವಿತ್ತಿದ್ದಾರೆ: ಗುಡ್ಡಗಾಡಿನ ಜನರೆಂದು ಹೇಳಲಾದ ಸಶಸ್ತ್ರ ಪುಂಡರು ಪಶ್ಚಿಮ ಪಂಜಾಬಿನ ಕಡೆಯಿಂದ ಕಾಶ್ಮೀರದೊಳಗೆ ಹೊಗುವಾಗ ಪಾಕಿಸ್ತಾನ ಸರಕಾರ ನಿದ್ರಿಸುತ್ತಿತ್ತೆ? ಅವರನ್ನು ತಡೆಯಲು ಅದಕ್ಕೆ ಸಾಮರ್ಥ್ಯವಿದ್ದಿಲ್ಲವೆ? ಅವರಿಗೇಕೆ ಆಸ್ಪದ ಕೊಟ್ಟಿತು? ಅಥವಾ ಹಾಗೆ ಅವರು ಮಾಡುವುದು ಅದಕ್ಕೆ ಇಷ್ಟವಾಗಿತ್ತೆ? ಈ ಪ್ರಶ್ನೆಗಳಿಗೊಂದೇ ಒಂದು ನಿಶ್ಚಿತ ಉತ್ತರವಿದೆ: ಪಾಕಿಸ್ತಾನವು ಅಲ್ಪಸಾದ ಆ ಪುಂಡ ತಂಡಗಳನ್ನು ಎದುರಿಸಲಾರದಷ್ಟು ದುರ್ಬಲವಿದೆಯೆಂದರೆ ಯಾರಿಗೆ ನಂಬಲು ಸಾಧ್ಯ? ಅದು ದೇಕೆಂತಲೇ ಹಾಗೆ ಆ ಪುಂಡರಿಗೆ ನೆರವಿತ್ತು ಅವರನ್ನು ಕಾಶ್ಮೀರ ಸರಕಾರವನ್ನು ಬೆದರಿಸಲು ಅಟ್ಟಲಾಗಿದೆಯೆಂಬುದು ಸ್ವತಃಸಿದ್ಧವಾಗಿದೆ. ಇಷ್ಟನ್ನೂ ಮಾಡಿ ಬಳಿಕ ಹಿಂದುಸ್ತಾನ ಸರಕಾರವು ಕುಟಿಲತನದಿಂದ ಕಾಶ್ಮೀರವನ್ನು ಒಕ್ಕೂಟಕ್ಕೆ ಸೇರಿಸಿಕೊಂಡಿತೆಂದು ಕಳ್ಳನೇ ಸ್ವತಃ ಕದ್ದ ಮಾಲನ್ನು ಕೈಯಲ್ಲಿ ಹಿಡಿದುಕೊಂಡು— ಅಯ್ಯೋ ನನ್ನ ಒಡವೆಗಳನ್ನು ಕದ್ದರೋ— ಎಂದು ಕೂಗುವಂತೆ ಕೂಗಿ ಕೊಳ್ಳುವ ಜಿನ್ನಾ ಸರಕಾರಕ್ಕೆ ಮದ್ಯಪಾನ ಪ್ರತಿಬಂಧಕ ಕಾಯಿದೆ ಅಗತ್ಯವಿರುವುದೇ? ಎನಿಸುತ್ತದೆ.

### ಪಟೇಲರ ಪರಿಶೀಲನೆ

ಹಿಂದುಸ್ತಾನದ ಉಪಮುಖ್ಯಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಮತ್ತು ಸಂರಕ್ಷಣ ಮಂತ್ರಿಗಳಾದ ಸರದಾರ ಬಲದೇವಸಿಂಗರು ಕಾಶ್ಮೀರದ ಪರಿಸ್ಥಿತಿಯನ್ನು ಪ್ರತ್ಯಕ್ಷ ಪರಿಶೀಲಿಸಲು ತಾ ೪ರ ಮುಂಜಾವದಲ್ಲಿ ವಿಮಾನವೇರಿ ಅಲ್ಲಿಗೆ ಹೋಗಿ ಸಾಯಂಕಾಲ ಮರಳಿ ಹೊಸದಿಲ್ಲಿಗೆ ಬಂದರು. ಮಂತ್ರಿಗಳು ಶ್ರೀನಗರಕ್ಕೆ ಹೋದ ಕೂಡಲೆ ಹಿಂದುಸ್ತಾನದ ಸೇನಾಧಿಕಾರಿಗಳು ಮತ್ತು ಕಾಶ್ಮೀರದ ಸಿವಿಲ್ ಅಧಿಕಾರಿಗಳೊಡನೆ ವಿಚಾರವಿನಿಮಯಮಾಡಿದರೆಂದು ತಿಳಿಯುತ್ತದೆ. ಬ್ರಿಗೇಡ್ ಹೆಡ್ ಕ್ವಾರ್ಟರ್ಸಿನಲ್ಲಿ ಶೇಖ ಅಬ್ದುಲ್ಲಾ ಮತ್ತು ಅವರ ಸಹಾಯಕರನ್ನು ಕಂಡು ಪರಿಸ್ಥಿತಿಯನ್ನು ಚರ್ಚಿಸಿದರು. ಅದರಿಂದ ಸ್ಪಷ್ಟವಾದ ಅಂಶವಿಂತಿದೆ: ಹೊಸದಿಲ್ಲಿಯಿಂದ ಸೈನಿಕರು ಮತ್ತು ಸಲಕರಣೆಗಳನ್ನು ಕಾಶ್ಮೀರಕ್ಕೆ ಒಯ್ಯುತ್ತಿರುವ ಹಿಂದೀ ವಿಮಾನಗಳು ಪಾಕಿಸ್ತಾನದ ಗಡಿಯಮೇಲೆ ಹಾರಿಹೋಗಿರುವದಿಲ್ಲ ಮತ್ತು ಪಾಕಿಸ್ತಾನ ಪ್ರದೇಶದಮೇಲೆ ಹೋಗಕೂಡದೆಂದು ಕಟ್ಟಪ್ಪಣೆ ಮಾಡಲಾಗಿದೆ. ಆದರೆ ಕೆಲವು ದಿನಗಳ ಹಿಂದೆ ಪಾಕಿಸ್ತಾನದ ಯುದ್ಧವಿಮಾನವೊಂದು ಕಾಶ್ಮೀರ ಕಂದರದ ಮೇಲೆ ಅಂತರ್ರಾಷ್ಟ್ರೀಯ ನಿಯಮವನ್ನುಲ್ಲಂಘಿಸಿ ಹಾರುತ್ತಿದ್ದುದು ಕಂಡು ಬಂದಿದೆ. ಹೀಗಿದ್ದರೂ ಹಿಂದುಸ್ತಾನ ವಿಮಾನಗಳು ಅಂತರ್ರಾಷ್ಟ್ರೀಯ ನಿಯಮವನ್ನುಲ್ಲಂಘಿಸಿ ಪಾಕಿಸ್ತಾನದಮೇಲೆ ಹಾರಿ ಕಾಶ್ಮೀರಕ್ಕೆ ಹೋಗುತ್ತಿವೆಯೆಂದು ಪಾಕಿಸ್ತಾನ ಆರೋಪಿಸಿದೆ. ಆದಕ್ಕುತ್ತರವಾಗಿ ಖಂಡಿತೋಕ್ತಿಯಿಂದ ಹಿಂದುಸ್ತಾನ ಸರಕಾರವು ಸತ್ಯಸಂಗತಿಯನ್ನು ಬಯಲಿಗೆಳೆದು ತೋರಿಸಿದೆ. ಇಷ್ಟಕ್ಕೆ ಮೌಂಟಬ್ಯಾಟನ್—ಜಿನ್ನಾ ಭೆಟ್ಟಿಯನಂತರ ಪಾಕಿಸ್ತಾನದ ಮುಸ್ಲಿಂ ಮುಂದಾಳುಗಳಿಗೆ ಪರಿಸ್ಥಿತಿಯು ಅರಿವಾಗಿ ಅಸೀಲ್ ಸಕಾಸ ಪುಂಡರನ್ನು ತಡೆಗಟ್ಟಲು ಲಾಹೋರಿಂದ ರಾವಲಪಿಂಡಿಗೆ ಹೋಗಿರುವರೆಂದು ತಿಳಿದುಬಂದಿದೆ.

### ಖುರ್ಶೀದರ ಬಂಧನದ ಕತೆ

ಇದರ ನಡುವೆ ಕಾಯದೆ ಆಜಂ ಜಿನ್ನಾರ ಕಾರ್ಯದರ್ಶಿ ಖುರ್ಶೀದರನ್ನು ಕಾಶ್ಮೀರದಲ್ಲಿ ಬಂಧಿಸುವ ಕತೆಯೂ ನಡೆದು ಹೋಯಿತು. ಖುರ್ಶೀದರು ಕೆಲ ಕಾಲದಿಂದ ಕಾಶ್ಮೀರದಲ್ಲಿದ್ದು ಕಾಶ್ಮೀರವು ಪಾಕಿಸ್ತಾನಕ್ಕೆ ಸೇರಬೇಕೆಂಬ ಪ್ರಚಾರವನ್ನು ಕೈಕೊಂಡಿದ್ದರು. ಹೈದರಾಬಾದಿನ ಇತ್ತಿಹಾದುಲ್ ಮುಸ್ಲಿಮೀನ ಸಂಘದಂಥ ಸಂಘವೊಂದನ್ನು ಕಾಶ್ಮೀರದಲ್ಲಿ ಸ್ಥಾಪಿಸಲು ಅವರು ಹೆಣಗುತ್ತಿದ್ದುದು ತಿಳಿದುಬಂದಿದೆ. ಅವರ ಪ್ರಚೋದನದಿಂದಲೇ ಹಮೀದುಲ್ಲಾ ಖಾನರು ಕಾಶ್ಮೀರ ಆಝಾದ ಸರಕಾರವನ್ನು ಸ್ಥಾಪಿಸ ಹೋದುದು. ಆದರೆ ಕಾಶ್ಮೀರದಲ್ಲಿ ದಾಳಿ ಪ್ರಾರಂಭವಾದೊಡನೆ ಅವರು ಅಜ್ಞಾತವಾಸಿಗಳಾಗಿ ಚಳವಳದ ಸೂತ್ರಧಾರಿಗಳಾದರು. ಕಾಶ್ಮೀರದ ಪೋಲೀಸರು ಮತ್ತು ರಾಷ್ಟ್ರೀಯ ಪರಿಷತ್ತಿನ ಸ್ವಯಂಸೇವಕರು ಅವರನ್ನು ಗೊತ್ತುಹಚ್ಚಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಆದರೆ ಮೊನ್ನೆ ೨ ನೆಯ ತಾರೀಕಿನಲ್ಲಿ ಅವರು ಆಕಸ್ಮಾತ್ತಾಗಿ ಓರ್ವ ಸ್ವಯಂಸೇವಕನಿಗೆ ಕಾಣಿಸಿದ್ದರಿಂದ ಕೂಡಲೆ ಅವರನ್ನು ಬಂಧಿಸಲಾಯಿತು. ಅವರ ಹತ್ತಿರವಿದ್ದ ದಿನಚರಿ ಹೊತ್ತಿಗೆಯಲ್ಲಿ ಕೆಲವು ಸಂಸ್ಥಾನದ ಮುಸಲ್ಮಾನ ಮುಂದಾಳುಗಳ ವಿಳಾಸಗಳೂ ಬಾಂಬುಮಾಡುವ ವಿಧಾನವೂ ಸಿಕ್ಕಿರುತ್ತವೆ. ಅವುಗಳ ಸಹಾಯದಿಂದ ಬಂದೂಕನ್ನು ತಯಾರಿಸುತ್ತಿದ್ದ ಒಬ್ಬ ಕಮ್ಮಾರನನ್ನೂ ಸೆರೆಹಿಡಿಯಲಾಯಿತು.

### ಹಿಂದೀ ಸೈನಿಕರ ಸಾಹಸ

ಪಾಕಿಸ್ತಾನಿಗಳ ಚಾಣಕ್ಯ ತಂತ್ರಗಳೆಲ್ಲ ಮೇಲೆ ಹೇಳಿದಂತೆ ಈಗ ಚೆನ್ನಾಗಿ ಬೆಳಕಿಗೆ ಬಂದುದರಿಂದ ಅದು ಹಾಗೆ ಇದು ಹೀಗೆಯೆಂದು ಪಾಕಿಸ್ತಾನದ ಪಂಡಿತರು ತರ್ಕ ಹೂಡಲು ಯಾವ ಅವಕಾಶವೂ ಉಳಿಯದಂತಾಯಿತು. ಹಿಂದುಸ್ತಾನದ ಅಧಿಕಾರಿಗಳೆಂದು ಅವರ ಪ್ರೇತ ಮುಖಕ್ಕೆ ಕನ್ನಡಿ ಹಿಡಿದಿದ್ದಾರೆ. ಇಲ್ಲಿಯ ದಂಡಾಳುಗಳು ಮತ್ತು ಶೇಖ ಅಬ್ದುಲ್ಲಾರ ಹತ್ತು ಸಾವಿರ ಸ್ವಯಂಸೇವಕರು ಯಶಸ್ವಿಯಾಗಿ ದಾಳಿಗಾರರನ್ನು ಹಿಂದೂಡುತ್ತಿರುವರು. "ಕಾಶ್ಮೀರದ ಸಿಂಹ ಚಿರಕಾಲ ಬಾಳಲಿ" ಎಂದು ಅವರು ಘೋಷಿಸುತ್ತಿದ್ದಾರೆ. ಶ್ರೀನಗರದ ಸಮೀಪದಲ್ಲಿ ಕಳೆದ ೪ ನೆಯ ದಿನಾಂಕದಲ್ಲಿ ಹಿಂದುಸ್ತಾನದ ಏಳುನೂರು ಸೈನಿಕರು ಮಶೀನಗನ್ನುಗಳನ್ನು ಹಾರಿಸಿ ಪುಂಡರೊಡನೆ ೪ ತಾಸುಗಳ ತನಕ ಸೆಣಸಿ ಅವರಲ್ಲಿ ಅರ್ಧದಷ್ಟು ಜನರನ್ನು ಯಮಲೋಕಕ್ಕೆ ಕಳುಹಿದರೆಂದು ತಿಳಿಯುತ್ತದೆ; ಕೆಲವರು ಹಾದಿಯಲ್ಲಿರಬಹುದು, ಕೆಲವರು ಆಗಲೇ ಊರು ಸೇರಿರಬಹುದು.

ಮರದ ಮೇಲಿನ ದೇವರೆನಿಸಿ ಕುಳಿತ ಪುಂಡ ಕೋತಿಗಳನ್ನು ಗುಂಡಿಕ್ಕಿ ಕೆಳಗುರುಳಿಸಲಾಯಿತು. ಹಿಂದೀ ಸೈನಿಕರು ಸಂಖ್ಯೆಯಲ್ಲಿ ಕಡಿಮೆಯಿದ್ದರೂ ಧೈರ್ಯದಿಂದ ಮುನ್ನುಗ್ಗಿದರು. ಅವರಿಗೆ ಅಲ್ಪಸ್ವಲ್ಪ ಹಾನಿಯಾಗಿದೆ. ಸ್ಥಳ ಪರೀಕ್ಷೆಯ ವಿಮಾನಗಳು ನೂರು ಹೆಣಗಳನ್ನು ಗುರುತಿಸಿವೆ. ವಿಮಾನಗಳು ಕಾಲಾಳುಗಳೊಡನೆ ಸಹಕರಿಸಿ ಚಟುವಟಿಕೆ ನಡೆಸಿವೆ. ಶ್ರೀನಗರವು ಶಾಂತವಾಗಿದ್ದರೂ ಅದು ಗಂಡಾಂತರದಿಂದ ಸಂಪೂರ್ಣವಾಗಿ ಪಾರಾಗಿಲ್ಲವೆಂದು ಹೇಳಲಾಗುತ್ತಿದೆ. ಆ ಕಾರಣದಿಂದ ಹಿಂದುಸ್ತಾನದಿಂದ ಅನೇಕ ದಲಗಳು ಗಾಳಿಸವಾರಿಯಿಂದ ಕಾಶ್ಮೀರಕ್ಕೆ ನುಗ್ಗಿ ನಡೆಯುತ್ತಲೇ ಇದ್ದಾರೆ.

### ದಾಳಿಗಾರರು

ದಾಳಿಗಾರರಲ್ಲಿ ಮೂರು ವಿಧದವರಿದ್ದಾರೆಂದು ದಂಡನಾಯಕರ ಮತ. (೧) ತರಬೇತಿ ಹೊಂದಿದ ಸೈನಿಕರು ಇನ್ನೂರು, (೨) ಸುಲಿಗೆಗಾಗಿ ಬಂದ ಅಫ್ರಿದಿ, ಮಾಸಲಾದ ಮತ್ತು ವಜೀರಿ ಕಿರಾತರು, (೩) ರೈಫಲ್ ಕೊಟ್ಟು ಕಾಶ್ಮೀರದ ಆಕ್ರಮಣಕ್ಕಾಗಿ ಕಳುಹಲಾದ ಹಜಾರ, ಮುರಿ ಮುತ್ತು! ಮುಸಫರಬಾದುಗಳ ನಿವೃತ್ತ ಸೈನಿಕರು ಇಂಥ ಕಾಡು ಸೈನ್ಯವನ್ನು ಕಳುಹಿ ಕಾಶ್ಮೀರದಲ್ಲಿ ಕಾಳಗದ ಕಿಚ್ಚೆಬ್ಬಿಸಿದ ಪಾಕಿಸ್ತಾನವಿಂದು ತಲೆಕೂಡಿ ಹಿಡಿದು— ಮಾಡಿದ್ದುಣ್ಣೋ ಮಹಾರಾಯ— ಎಂದು, ಕುಳಿತು ಕೊಳ್ಳುವ ಕಾಲಬಂದಿದೆ. ಇನ್ನಾದರೂ ಅದಕ್ಕೆ ಬುದ್ಧಿ ಬಂದೀತೆಂದು ನಂಬಬಹುದೇ?

### ಹೈದರಾಬಾದಿನ ಪುಂಡಪಾಳೆಯ

ಸಂಗೀತಗಾರನ ಆಲಾಪನೆಯಂತೆ ಪ್ರತಿಸಲ ಒಂದೊಂದು ಹೊಸ ಕರಡನ್ನು ತೆಗೆದುಕೊಂಡು ಹಾಡುತ್ತನಡೆದ ಹೈದರಾಬಾದಿನ ಸಂಧಾನವು ಅದರ ಕಾರ್ಯಕ್ರಮದ ಒಂದು ಮುಖ; ಸಂಸ್ಥಾನದಲ್ಲಿ ಸರಕಾರದ ಸಹಾನುಭೂತಿಯಿಂದ ಇತ್ತಿಹಾದುಲ್ ಮುಸ್ಲಿಮೀನ ಸಂಸ್ಥೆಯವರ ಪ್ರತ್ಯಕ್ಷ ಹೋರಾಟ ಇನ್ನೊಂದು ಮುಖ.

### ರಾಕ್ಷಸೀಕೃತ್ಯ

ಚಿಲಕಾಲಗುಡ, ಮೆಟ್ಟುಗುಡ, ಸಿತಾವಲಿ ಕುಂಡಿ, ಮುಶಿರಾಬಾದ ಮೊದಲಾದ ಪ್ರದೇಶಗಳಲ್ಲಿ ಪುಂಡರು ಹಿಂದುಗಳು ಮನೆಬಿಡಬೇಕೆಂದು ಬೆದರಿಸುತ್ತ, ಕಲ್ಲಿನ ಮಳೆ ಸುರಿಸುತ್ತ, ಮನೆಮಾರುಗಳನ್ನು ಸುಡುತ್ತ, ಹಿಂದುಗಳಿಗೆ ಸಿಕ್ಕಿದಲ್ಲಿ ಚಿತ್ರಹಿಂಸೆಕೊಡುತ್ತ, ಚೂರಿಹಾಕುತ್ತ, ಹೆಂಗಸರನ್ನು ಬತ್ತಲೆನಿಲ್ಲಿಸುವುದು, ಕದ್ದೊಯ್ಯುವುದು, ಅವರಮೇಲೆ ಅತ್ಯಾಚಾರ ಮಾಡುವುದು ಒಂದೇ ಎರಡೇ? ಹೀಗೆ ನಾನಾರೀತಿಯಿಂದ ರಾಕ್ಷಸೀಕೃತ್ಯ ನಡೆಸುತ್ತಿದ್ದುದನ್ನು "ಸಂಯುಕ್ತಕರ್ನಾಟಕ" ದ ಸ್ವಂತಸುದ್ದಿಗಾರರು ಕಣ್ಣಾರೆಕಂಡುಬಂದಿರುವುದಾಗಿ ಹೇಳಿದ್ದಾರೆ. ನಿಜಾಮ ಸಾಹೇಬರು ತಮ್ಮ ರಾಣೀವಾಸದಲ್ಲಿ ಕಣ್ಣುಮುಚ್ಚಿ ಕುಳಿತಂತೆ ತೋರುತ್ತದೆ. ಏನನ್ಯಾಯ? ದೊರೆಗಳೆಂದುಭೂಮಿಗೆಹೊರೆಗಳು- ಎಂಬಮಾತಿಗೆ ಮೊದಲ ಮಾದರಿಯಾಗಿದ್ದಾರೆ ಹೈದರಾಬಾದಿನ ನರೇಂದ್ರರು, ಪೋಲೀಸರು ಈ ಕ್ರೂರ ಕೃತ್ಯಗಳನ್ನು ಕಂಡು ರಸಾಸ್ವಾದ ಮಾಡುತ್ತನಿಂತ ರುದ್ರಗಣಗಳಂತಿದ್ದರೆಂದರೆ ಅಲ್ಲಿ ಸರಕಾರವು ಅದರ ಹೆಸರಿಗೇ ಕಲಂಕ ಹಚ್ಚುವವಂಥದ್ದೆನಿಸುವುದಿಲ್ಲವೆ? ಇಷ್ಟು ಮಾಡಿ ಇದ್ದದ್ದನ್ನು ಇದ್ದ ಹಾಗೆ ಹೇಳುವುದಾದೀತೆ! ಎಂದೂ ಇಲ್ಲ— ನವಂಬರ ೧ ನೆಯ ತಾರೀಖಿನ ರಾತ್ರಿ ೯॥ ಗಂಟೆಗೆ ಚಿಲಕಾಲಗುಡದಲ್ಲಿ ಸಣ್ಣದಂಗೆಯೆದ್ದಿತು. ಕೆಲವು ಕುಡುಕರಿಂದ ಅದು ಆರಂಭವಾಗಿ ಜಾತೀಯ ಸ್ವರೂಪತಾಳಿತು; ಆದರೆ ಪೋಲೀಸರು ಪರಿಸ್ಥಿತಿಯನ್ನು ಹದಕ್ಕೆ ತಂದುದಲ್ಲದೆ ಮುಸಲ್ಮಾನರು ಬೇರೆ ಜಾತಿಯವರಿಗೆ ತಮ್ಮ ಮನೆಗಳಲ್ಲಿ ಆಶ್ರಯ ಕೊಟ್ಟಿದ್ದರಿಂದ ಎಲ್ಲ ಸರಿಹೋಯಿತು— ಎಂದು ಸರಕಾರವೊಂದು ಪ್ರಕಟನೆ ಹೊರಡಿಸಿದೆ. ಇದಕ್ಕೇನೆನ್ನಬೇಕು?

### ದೆವ್ವದ ವೇದಪಾಠ

ಇಷ್ಟೆಲ್ಲ ಪಿಶಾಚನರ್ತನ ನಡೆಸಿಯೂ ಕಡೆಗೆ ಬಹಳ ಪುನೀತರಂತೆ ತೋರ್ಪಡಿಸಿಕೊಂಡು ಇತ್ತಿಹಾದುಲ್ ಮುಸ್ಲಿಮೀನ ಸಂಘದ ಅಧ್ಯಕ್ಷರಾದ ಕಾಸೀಮ ರಝ್ವಿಯವರು ಒಂದು ಹೇಳಿಕೆ ಹೊರಡಿಸಿ ದಕ್ಷಿಣ ಮುಸಲ್ಮಾನರಿಗೆ ಉಪದೇಶ ಮಾಡಹೊರಟು ಅವರು ಕಿಡಿಗೇಡಿಗಳ ಕಾರ್ಯದಿಂದ ಉದ್ರಿಕ್ತರಾಗದೆ ಶಾಂತಿಯನ್ನು ಕಾಯ್ದುಕೊಳ್ಳಬೇಕೆಂದು ಹೇಳಿ, ಹಿಂದುಗಳನ್ನು ಕುರಿತು— 'ಹಿಂದುಗಳೇ, ನೀವು ಅನಿಷ್ಟವಾದ ಕೃತ್ಯಗಳಲ್ಲಿ ತೊಡಗಿ ಇಲ್ಲವೆ ಹಾರಿಕೆ ಸುದ್ದಿ ಹಬ್ಬಿಸಿ ಶಾಂತತೆಗೆ ಭಂಗ ತರಕೂಡದು. ಭಯೋತ್ಪಾದಕ ಕೃತ್ಯಗಳಿಂದ ಲಾಭವಿಲ್ಲ. ನಿಮ್ಮ ಸಂರಕ್ಷಣೆಯ ಭಾರ ನಮ್ಮದು. ಮುಸಲ್ಮಾನರು ನಿಮ್ಮ ವಿತ್ತ ಜೀವಿತಗಳನ್ನು ರಕ್ಷಿಸುವರು. ನೀವು ಅವರನ್ನು ಸಿಟ್ಟಿಗೆಬ್ಬಿಸುವಂಥ ದಾರಿ ಹಿಡಿಯ ಕೂಡದು' ಎಂದು ವಿವೇಕ ಹೇಳ ಬಂದಿದ್ದಾರೆ. ಇವರ ವಿಕಟ ಪ್ರತಾಪಕ್ಕೇನೆನ್ನಬೇಕು! ದೆವ್ವ ಬಂದು ವೇದ ಪಾಠ ಹೇಳಿದಂತೆ, ಸೂಳೆ ಬಂದು ಗರತಿಗೆ ಗರತಿತನವನ್ನು ಉಪದೇಶಿಸಿದಂತೆ, ಕೊಲೆಗಡಿಕನು ಬಂದು ಪ್ರಾಣಿದಯೆಯನ್ನು ಬೋಧಿಸಿದಂತೆ ಕಾಸೀಮ ರಝ್ವಿ ಸಾಹೇಬರಿಂದು ಹಾಲು ಮುಚ್ಚಿದ ವಿಷ ಪಾತ್ರದಂತೆ ನಿಂತು ಹಿಂದುಗಳಿಗೆ ಎಚ್ಚರಿಕೆಕೊಡಬಂದುದು ಅವರಪಿತ್ತಪ್ರಕೋಪದ ಮಹಿಮೆಯಲ್ಲದೆ ಬೇರೆ ಇರಲಾರದು. ಹೈದರಾಬಾದಿನ ಸಂತಸ್ತರು ಗಂಡುಗಲಿಗಳಂತೆ ಶಸ್ತ್ರಾಸ್ತ್ರಗಳನ್ನೆದುರಿಸಿ ಈ "ದೀನ್, ದೀನ್" ಎಂದು ಕೂಗಿ ಕುಣಿವ ಕರಾಳ ಮುಖದ ಕದೀಮರ ಹಾವಳಿಯನ್ನು ತಡೆಗಟ್ಟಲು ಸಂಘಟಿತರಾಗಿ ಮುನ್ನುಗ್ಗದಿದ್ದರೆ ಅವರ ಸರ್ವನಾಶವಾಗಲು ಬಹಳ ಕಾಲ ಹಿಡಿಯದು. ಆದುದರಿಂದ ಪಕ್ಷಭೇದ, ಜಾತಿಭೇದಗಳನ್ನು ಬದಿಗಿಟ್ಟು ಒಂದಾಗಿ ಹೈದರಾಬಾದಿನ ಬಹುಸಂಖ್ಯಾಕರು ಪಿಶಾಚ ರಾಜ್ಯದ ಪರಿಸಮಾಪ್ತಿಗೆ ಸರ್ವತೋಮುಖವಾದ ಪ್ರಯತ್ನ ನಡೆಸದಿದ್ದರೆ ಗತ್ಯಂತರವಿಲ್ಲ.

### ಹೋರಾಟಕ್ಕೆ ಬೆಂಬಲ

ಹೈದರಾಬಾದು ಹಿಂದೀ ಒಕ್ಕೂಟಕ್ಕೆ ಸೇರಬೇಕು, ಅವಶ್ಯವೆನಿಸಿದರೆ ಈ ಸಂಬಂಧದಲ್ಲಿ ಜನಾಭಿಪ್ರಾಯ ತಿಳಿದುಕೊಳ್ಳಬಹುದು, ಸಂಸ್ಥಾನದಲ್ಲಿ ಹೊಣೆಗಾರ ಸರಕಾರ ಸ್ಥಾಪಿಸಬೇಕು ಮತ್ತು ಪ್ರೌಢ ಮತದಾರ ಪದ್ಧತಿಯಿಂದ ಘಟನಾ ಸಮಿತಿಯನ್ನು ನೇಮಿಸಬೇಕು ಈ ೩ ಮೂಲಭೂತ ತತ್ವಗಳು ಮನ್ನಿಸಲ್ಪಟ್ಟರೆ ಮಾತ್ರ ಹೈದರಾಬಾದಿನ ಹೋರಾಟ ನಿಲ್ಲುವದೆಂದು ಪುಣೆಯಲ್ಲಿ ಅಕ್ಟೋಬರ ೩೦ಕ್ಕೆ ಶ್ರೀ. ಎಸ್. [illegible] ಪಾಟೀಲರ ಅಧ್ಯಕ್ಷತೆಯಲ್ಲಿ ಹೈದರಾಬಾದಿನ ಪರಿಸ್ಥಿತಿಯನ್ನು ಚರ್ಚಿಸಲು ಮುಂಬಯಿ, ಮಹಾರಾಷ್ಟ್ರ, ಆಂಧ್ರ, ಮಧ್ಯಪ್ರಾಂತ, ವರ್‍ಹಾಡ, ಕರ್ನಾಟಕ, ಮೈಸೂರು ಮತ್ತು ಹೈದರಾಬಾದು ಕಾಂಗ್ರೆಸ್ ಸಮಿತಿಯ ಪ್ರತಿನಿಧಿಗಳ ಸಭೆಯಲ್ಲಿ ನಿರ್ಣಯಿಸಲಾಯಿತು. ಇದು ಅತ್ಯಂತ ಸ್ವಾಗತಾರ್ಹವಾದ ಪ್ರಯತ್ನವೆನ್ನಬಹುದು. ನಿಜಾಮ ಸರಕಾರದ ದಬ್ಬಾಳಿಕೆಯಿಂದ ಹಣ್ಣಾದ ಸೋದರರಿಗೆ ಇದೊಂದು ಸಮರ್ಥ ಬೆಂಬಲ ದೊರೆತಂತಾಯಿತು. ಇದರಿಂದ ಅವರಿಗೆ ಅಂತ್ಯ ಜಯ ಸಿದ್ಧವೆಂದೇ ಹೇಳಬಹುದು.

### ಜುನಾಗಡದಲ್ಲಿ ಪ್ರಜಾಸಾಹಸ

ನವಾಬಸಾಹೇಬರು ಬೇಗಮರೊಡನೆ, ಶಹಜಾದ ಶಹಜಾದೆಯರೊಡನೆ ಕರಾಚಿಗೆ ಪಲಾಯನ ಮಾಡಿರುವದು ಆಗಲೇ ಪ್ರಸಿದ್ಧವಾಗಿದೆ. ಪ್ರಜಾ ಸರಕಾರದ ನಾಯಕರಾದ ಶ್ರೀ ಶ್ಯಾಮಲದಾಸ ಗಾಂಧಿಯವರು ದಿನೇ ದಿನೇ ತಮ್ಮ ದಂಡಯಾತ್ರೆಯನ್ನು ಮುಂಬರಿಸುತ್ತ ನಿರಾತಂಕವಾಗಿ ಜುನಾಗಡವನ್ನು ವಶಪಡಿಸಿಕೊಳ್ಳುತ್ತಿರುವದು ಸುವಿದಿತವಿದೆ. ಇದನ್ನು ನೋಡಿ ಕಂಗೆಟ್ಟ ಮುಸಲ್ಮಾನ ಪ್ರತಿಗಾಮಿಗಳೆಂದು ಬಗ್ಗಿ ಶ್ಯಾಮದಾಸರಲ್ಲಿ ಸಂಧಾನ ನಡೆಸಿಬಂದಿದ್ದಾರೆ. 'ದಂಡೇನ ಗೌರ್ಗರ್ದಭಾಃ' ಎಂಬ ನ್ಯಾಯದಂತೆ ಎತ್ತು ಕತ್ತೆಗಳಂತೆ ವರ್ತಿಸಿದ ಜನರಿಗೆ ಲತ್ತೆಬಿದ್ದೊಡನೆ ಚಿತ್ತ ಇಳಿಯಿತು. ಆದರಿಂದ ನವಾಬರಾದ ಹಿಮ್ಮತಖಾನರನ್ನು ಪುನಃ ಜುನಾಗಡದ ಪಟ್ಟಕ್ಕೇರಿಸಲು ಒಪ್ಪಿದರೆ ಕೆಲವೊಂದು ಕರಾರುಗಳ ಮೇಲೆ ಜುನಾಗಡ ಸಂಸ್ಥಾನವನ್ನು ಹಿಂದುಸ್ತಾನಕ್ಕೆ ಸೇರಿಸುವ ಪ್ರಯತ್ನ ಮಾಡುವದಾಗಿ ಜುನಾಗಡದ ಮುಸ್ಲಿಂ ಜಮಾತದ ಶಿಷ್ಟಮಂಡಲವೊಂದು ೧ ನೆಯ ದಿನಾಂಕದಲ್ಲಿ ಶ್ರೀ ಶ್ಯಾಮಲದಾಸ ಗಾಂಧಿಯವರನ್ನು ಕಂಡು ಜುನಾಗಡದ ಬಿಕ್ಕಟ್ಟನ್ನು ಬಿಡಿಸಲು ತಮ್ಮ ಕರಾರುಗಳನ್ನು ಹೇಳಿದರು. ಆದರೆ ಅದಕ್ಕೆ ಶ್ರೀ ಗಾಂಧಿಯವರೆಂತಹ ಉತ್ತರವಿತ್ತರು! ಜುನಾಗಡದ ಕೋಟೆಯ ಮೇಲೆ ಹಿಂದೀ ರಾಷ್ಟ್ರಧ್ವಜವನ್ನು ಹಾರಿಸಿ, ಪಾಕಿಸ್ತಾನದ ಎಲ್ಲ ಸಂಬಂಧವನ್ನೂ ಕಡಿದುಕೊಂಡು, ಸಂಸ್ಥಾನದಲ್ಲಿ ಹೊಣೆಗಾರ ಸರಕಾರವನ್ನು ಸ್ಥಾಪಿಸಿದ ನಂತರವೇ, ಹಿಮ್ಮತಖಾನರನ್ನು ಪಟ್ಟಕ್ಕೆ ಕೂಡಿಸುವ ವಿಚಾರ ಮಾಡಲಾಗುವದು'—ಎಂಬುದೇ ಅವರ ನಿರ್ದಾಕ್ಷಿಣ್ಯದ ಉತ್ತರ. ಇದನ್ನು ಕೇಳಿ ಸಪ್ಪೆ ಮೋರೆ ಮಾಡಿಕೊಂಡು ಜಮಾತದ ಪ್ರತಿನಿಧಿಗಳು ಮರಳಿದರು. ಮತ್ತೇನು ಮಾಡಬಲ್ಲವರು?

ಜುನಾಗಡ ಸಂಸ್ಥಾನದಲ್ಲಿ ದಿನಾಂಕ ೨ರಲ್ಲಿ ಜುನಾಗಡ ನಗರಕ್ಕೆ ೧೮ ಮೈಲು ದೂರದಲ್ಲಿರುವ ದಿಲವರಘಡ ಮತ್ತು ಅದರ [illegible] ಹಳ್ಳಿಗಳನ್ನು ಜುನಾಗಡ ತಾತ್ಪೂರ್ತಿಕ ಸರಕಾರದ ಸೈನಿಕರು ವಶಪಡಿಸಿಕೊಂಡಿರುವರೆಂದು ಸುದ್ದಿ ಬಂದಿದೆ. ಇದರಿಂದ ಪ್ರಜಾಸಾಹಸವು ಅಡೆತಡೆಯಿಲ್ಲದೆ ಮುಂದೆ ಸಾಗಿದೆಯೆಂಬುದು ಸ್ಪಷ್ಟವಾಗುತ್ತಿದೆ. ಜುನಾಗಡವು ಪಾಕಿಸ್ತಾನದ ನಕ್ಷೆಯಿಂದ ಮಾಯವಾದಂತೆಯೇ ಸರಿಯೆನ್ನಲು ಅಡ್ಡಿಯಿಲ್ಲ. ಹೈದರಾಬಾದಿನ ಪ್ರಜೆಗಳಿಗೆ ಇದೊಂದು ಪಾಠವಾಗಿದೆ. ಸಂಘ ಶಕ್ತಿಯ ಮುಂದೆ ಯಾವ ಶಕ್ತಿ ನಿಂತೀತು? ಇನ್ನೇನು, ಸದ್ಯದಲ್ಲೇ ಶ್ರೀ ಶ್ಯಾಮಲದಾಸ ಗಾಂಧಿಯವರು ತಮ್ಮ ಪ್ರತಿಜ್ಞೆಯನ್ನು ಪೂರೈಸಿ ಜುನಾಗಡದ ಹಿಂದಿನ ಚರಿತ್ರೆಗೆ ಇತಿಶ್ರೀ ಬರೆಯದಿರರೆಂದು ಖಂಡಿತವಾಗಿ ನಂಬಬಹುದು.

---

### ಹೈದರಾಬಾದಿನಲ್ಲಿ ಕಗ್ಗೊಲೆ

ಹೈದರಾಬಾದಿನಲ್ಲಿ ಒಂದು ಸಾವಿರ ಜನರು ಕೊಲೆಮಾಡಲ್ಪಟ್ಟಿದ್ದು ಸೀತಾಫಾಟಮಂಡಿ ಮತ್ತು ಚಿಕಾಲಗುಡ ಭಾಗಗಳು ಉರಿಯುತ್ತಿವೆಯೆಂದು ಅಲ್ಲಿಂದ ಬಂದ ಕಣ್ಣಾರೆಕಂಡವನೊಬ್ಬ ತಿಳಿಸುತ್ತಾನೆ.

## ಅಂತರರಾಷ್ಟ್ರೀಯ

### ಫ್ರೆಂಚರ ದುಷ್ಪ್ರಯತ್ನ

ವ್ಹೀಯಟನಾಮುದಲ್ಲಿ ಫ್ರೆಂಚರು ತಮ್ಮ ಅರಸೊತ್ತಿಗೆಯನ್ನು ಶಾಶ್ವತಗೊಳಿಸಲು ಅತಿಪ್ರಯತ್ನ ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಬ್ರಿಟಿಶರು ಹಿಂದುಸ್ತಾನದಲ್ಲಿ ಅನುಸರಿಸಿದ ಭೇದ ನೀತಿಯನ್ನೇ ಅವರೂ ಅಲ್ಲಿ ಅನುಸರಿಸಿ ಕೆಲವು ಪಟ್ಟಣಗಳಲ್ಲಿ ತಮ್ಮ ತಂತ್ರಕ್ಕೆ ಬಲಿಯಾದ ಸ್ಥಳೀಯ ಮುಖಂಡರಿಂದ ತಮ್ಮ ಕಾರಭಾರ ನಡೆಸುತ್ತಿದ್ದಾರೆ. ಆದರೆ ಇಡೀ ದೇಶದಲ್ಲಿ ಉಂಟಾದ ಹೊಸ ಸ್ಫೂರ್ತಿ ಎಷ್ಟರ ಮಟ್ಟಿಗಿದೆಯೆಂಬುದನು ಭಾರತದಲ್ಲಿ ಇರುವ ವ್ಹೀಯಟನಾಮ ಪ್ರಜಾರಾಜ್ಯದ ಪ್ರತಿನಿಧಿಗಳಾದ ವ್ಹೈಥೇಚೌರವರ ಬಾಯಿಂದ ತಿಳಿಯಬರುವಾಗಿದೆ. ಇಂಡೋಚೀನದ ಪ್ರಜೆಗಳೆಂದು ಎಚ್ಚತ್ತಿದ್ದಾರೆ. ಅವರು ಫ್ರೆಂಚರ ಆಳಿಕೆಯನ್ನು ಸಹಿಸರು. ಕೊಚಿನ್ ಚೀನದ ಫ್ರೆಂಚರ ಗೊಂಬೆಯೆನಿಸಿದ ಮೊಟ್ಟ ಮೊದಲ ಮುಖ್ಯ ಮಂತ್ರಿಯು ಜನರ ಸಿಟ್ಟಿಗೆ ಗುರಿಯಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕಾಯಿತು. ೧೯೪೬ ರ ನವೆಂಬರದಲ್ಲಿ ಅವನ ಸಹಮಂತ್ರಿಗಳು ರಾಜೀನಾಮೆ ಕೊಡುವ ಪ್ರಸಂಗ ಉಂಟಾಯಿತು. ಉಳಿದ ಮೂವರನ್ನು ವ್ಹೀಯಟನಾಮ ಕೂಟಯುದ್ಧದಲದವರು ಯಮಪುರಿಗೆ ಕಳುಹಿದರು! ವ್ಹೀಯಟನಾಮುದ ಪ್ರಜಾರಾಜ್ಯದವರು ದೇಶದ್ರೋಹಿಗಳಿಗೆ ಕ್ರೂರ ಶಿಕ್ಷೆವಿಧಿಸುತ್ತಿರುವುದರಿಂದ ಅವರ ಸಂಖ್ಯೆ ಕಡಿಮೆಯಾಗುತ್ತಿದೆ. ನೂರಕ್ಕೆ ೪೫ ರಷ್ಟು ಪ್ರದೇಶವು ಈಗ ಪ್ರಜಾರಾಜ್ಯದ ವಶದಲ್ಲಿದೆ.

ಕೆಲವೊಮ್ಮೆ ಫ್ರೆಂಚರು ಕಾಯಿದೆಯಂತೆ ವ್ಹೀಯಟನಾಮ ಪ್ರಜಾರಾಜ್ಯದವರನ್ನು ಗೆದ್ದುದುಂಟು, ಆದರೆ ಅದರಿಂದ ಅಲ್ಲಿ ಅವರ ಅಧಿಕಾರ ಸ್ಥಾಪಿತವಾಗಲಿಲ್ಲ. ೩ ವರ್ಷ ಕಾಲ ಎಡೆ ಬಿಡದೆ ಯುದ್ಧ ಮಾಡಿದರೂ ಫ್ರೆಂಚರ ಗಾಳಿದಂಡು ಕೊಚಿನ ಚೀನದ ಜನರನ್ನು ಗೆಲ್ಲಲಾರದಾಯಿತು. ಇದರ ಜೊತೆಗೆ ಇಡೀ ಜಗತ್ತೇ ಇಂದು ದಾಸ ದೇಶಗಳ ಮುಕ್ತಿಯ ಬಗ್ಗೆ ಸಹಾನುಭೂತಿ ತೋರುತ್ತಿರುವುದರಿಂದ ಫ್ರೆಂಚರಿಗೆ ಬಹಳ ನಿರಾಶೆ ಮತ್ತು ಸಿಟ್ಟು ಉಂಟಾಗಿದೆ. ಸ್ವದೇಶದಲ್ಲಿ ಫ್ರೆಂಚರು ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಕ್ಕಿದ್ದಾರೆ; ಅಂತರಾಷ್ಟ್ರೀಯ ವೇದಿಕೆಯಲ್ಲಿ ರಾಜಕಾರಣದ ಜಂಜಡದಲ್ಲಿ ಒದ್ದಾಡುತ್ತಿದ್ದಾರೆ; ಅವರ ಉಳಿದ ವಸಾಹತುಗಳ ಜನರು ಸ್ವಾತಂತ್ರ್ಯಕ್ಕಾಗಿ ಚಳವಳ ಎಬ್ಬಿಸಿದ್ದಾರೆ. ಒಳಗೆ ತಮ್ಮ ಜನದ ಮೆಚ್ಚಿಗೆ ಪಡೆದು ತಮ್ಮ ಸರಕಾರ ಸ್ಥಿರ ಪಡಬೇಕಾದರೆ ಫ್ರೆಂಚರಿಗೆ ಈಗ ವ್ಹೀಯಟನಾಮುದಲ್ಲಿ ಹೇಗಾದರೂ ಮಾಡಿ ಜಯವನ್ನು ಸಂಪಾದಿಸಲೇ ಬೇಕಾಗಿದೆ; ಇಲ್ಲದೆ ಹೋದರೆ ಅವರು ಇಂಡೋಚೀನದಲ್ಲಿ ಪೆಟ್ಟು ತಿಂದು ಎಲ್ಲ ಕಳೆದುಕೊಂಡು ತಲೆಯ ಮೇಲೆ ಕೈಯಿಟ್ಟು ಮನೆಗೆ ತೆರಳಬೇಕಾಗುವುದು. ಆದುದರಿಂದ ಅವರು ಇಂಡೋಚೀನದ ಜನತೆಯನ್ನು ದಾಸ್ಯದಲ್ಲಿಡಲು ನಾನಾ ವಿಧವಾಗಿ ಮಿತಿಮೀರಿ ಪ್ರಯತ್ನಿಸುತ್ತಿದ್ದಾರೆ. ಶಸ್ತ್ರ ಬಲ ಹೆಚ್ಚಿರುವ ಅವರು ಹೊರ ಹೊರಗೆ ಗೆಲ್ಲಬಹುದು. ಆದರೆ ಜನತೆಯ ಹೃದಯವನ್ನೆಂದೂ ಗೆಲ್ಲಲಾರರು. ಆದರಿಂದ ಅವರ ಭ್ರಮೆ ನಿರಸನವಾಗಿ ಕೆಲವೇ ಕಾಲದಲ್ಲಿ ಕಾಲಿಗೆ ಬುದ್ಧಿ ಹೇಳುವ ಪ್ರಸಂಗ ಬರದಿರದು. ವ್ಹೀಯಟನಾಮುದ ಯೋಧರಾದರೂ ಪಳಗಿದವರೇ ಇದ್ದಾರೆ. ಅವರು ತಾಯ್ನಾಡನ್ನು ಎಂದೂ ಫ್ರೆಂಚರಿಗೆ ಬಿಟ್ಟುಕೊಡರು. ಫ್ರೆಂಚರಿಗೆ ಚೆನ್ನಾಗಿ ನಷ್ಟಕೊಡಲಾಗಿದೆ. ಇದನ್ನು ನೋಡಿದರೆ ಅವರ ದುಷ್ಪ್ರಯತ್ನಕ್ಕೆ ಜಯ ಸಿಗುವುದು ದು[illegible]ದು ಸ್ಪಷ್ಟವಾಗುತ್ತದೆ.

### ಹಿಂ[illegible]ಸ್ತಾನದ ಗೆಲುವು

ಸಂ. ರಾ. ಸಂಘದ ಸರ್ವಸದಸ್ಯರ ಸಭೆಯಲ್ಲಿ ದ. ಆಫ್ರಿಕವು ನೈಋತ್ಯ ಆಫ್ರಿಕದ ಆಡಳಿತವನ್ನು ನೆರವೇರಿಸಲು ಅಗತ್ಯವಾದ ವಿಶ್ವಸ್ತ ಮಂಡಲದ ಯೋಜನೆಯೊಂದನ್ನು ತಯಾರಿಸಬೇಕೆಂದು ಭಾರತದ ಪ್ರತಿನಿಧಿಗಳು ತಂದ ಠರಾವು ಪಾಸಾದ ಸುದ್ದಿ ಬಂದಿದೆ. ಡೇನರು ತಂದ ಉಪಸೂಚನೆ ಯೊಡನೆ ಪಾಸಾದುದು ಸಂಪೂರ್ಣ ಸಂತೋಷಕರವಲ್ಲದಿದ್ದರೂ ಮೂಲ ಠರಾವಿನ ಮುಖ್ಯಾಶಯವು ಈಡೇರುವಂತಾದುದರಿಂದ ಹಿಂದೀ ಪ್ರತಿನಿಧಿಗಳು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ಈ ಠರಾವಿನ ಬಗ್ಗೆ ಶ್ರೀಮತಿ ವಿಜಯ ಲಕ್ಷ್ಮೀ ಪಂಡಿತರೂ ಸರ್ ಮಹಾರಾಜ ಸಿಂಗರೂ ಮಾತಾಡಿದರು. ಆಸ್ಟ್ರೇಲಿಯದ ಪ್ರತಿನಿಧಿಯಾದ ಡಾ. ಇವ್ಹ್ಯಾಟನು ಸ್ಮಟ್ಸ ಸರಕಾರದ ಪರವಾಗಿ ಮಾತನಾಡಿದರೂ ಶ್ರೀಮತಿ ವಿಜಯ ಲಕ್ಷ್ಮಿಯವರ ಸಮರ್ಥನೆಯೆದುರು ಅದಾವುದೂ ನಡೆಯಲಾರದಾಯಿತು. ಹಿಂದುಸ್ತಾನದ ಈ ವಿಜಯದಿಂದ ನೈಋತ್ಯ ಆಫ್ರಿಕದಲ್ಲಿಯ ಜನತಾಹಿತವಾಗುವಂತಾದುದಲ್ಲದೆ ಹಿಂದೀ ಹಿತಸಂರಕ್ಷಣೆಗೂ ಅನುಕೂಲವುಂಟಾದಂತಾಯಿತು.

### ರಶಿಯ ಮತ್ತು ತುರ್ಕಿ

ತುರ್ಕಿಯಲ್ಲಿ ತನ್ನ ವರ್ಚಸ್ಸನ್ನು ಕಾಯ್ದುಕೊಳ್ಳಲು ಅಮೇರಿಕವು ವಿಶೇಷ ಔದಾರ್ಯ ತೋರಿ ಸಹಾಯ ಸೌಕರ್ಯಗಳನ್ನೊದಗಿಸಿಕೊಟ್ಟು ರಶಿಯದ ಪ್ರಭಾವವನ್ನಿಂದು ಜಯಪ್ರದವಾಗಿ ತಡೆಗಟ್ಟಿದೆಯೆನ್ನಬಹುದು. ಇದರಿಂದ ಸಿಟ್ಟಿಗೆದ್ದ ರಶಿಯವು ಹೇಗಾದರೂ ಮಾಡಿ ತುರ್ಕಿಗೆ ಬುದ್ಧಿಗಲಿಸಬೇಕೆಂದು ನಾನಾ ಮುಖದ ಪ್ರಯತ್ನದಲ್ಲಿ ತೊಡಗಿದೆ. ಈ ಕಾರಣದಿಂದಲೇ ತುರ್ಕಿಯ ಅಧ್ಯಕ್ಷನಾದ ಇಸ್ಮತ್ ಇನೋನು ರಶಿಯವಿಂದು ಅಲ್ಲದ ಸಲ್ಲದ ಹಕ್ಕುಗಳನ್ನು ತುರ್ಕಿಯಲ್ಲಿ ಸಾಧಿಸ ಹೊರಟಿದ್ದಲ್ಲದೆ ಹಿಂದಿನ ಮತ್ತು ಇಂದಿನ ಸಂಗತಿಗಳಿಗೆಲ್ಲ ಬೇರೆ ಬಣ್ಣ ಕೊಟ್ಟು ಪ್ರಚಾರ ಮಾಡ ತೊಡಗಿದೆಯೆಂದು ಹೇಳುವಂತಾದುದು. ರಾಷ್ಟ್ರೀಯ ಸುರಕ್ಷಿತತೆಗಾಗಿ ತನ್ನ ಸರಕಾರ ಬಹುದೊಡ್ಡ ದಂಡನ್ನು ಕಟ್ಟಲು ಅಪಾರ ಹಣವನ್ನು ಖರ್ಚು ಮಾಡಿದ್ದು ಅವನು ನ್ಯಾಯವೆನ್ನುತ್ತಾನೆ. ಇದು ಅಮೇರಿಕದ ಋಣತಿಂದ ನಾಲಿಗೆಯ ಮಾತೋ ಅಥವಾ ವಸ್ತುಸ್ಥಿತಿಯೇ ಹಾಗಿದೆಯೋ ಹೇಳಲಸದಳ.

### ಚೀನದ ಯಾದವಿಯ ನಿಜಸ್ವರೂಪ

ಚೀನದ ಅಂತಃಕಲಹವು ಚಿಯಾಂಗರ ಸರಕಾರಕ್ಕೂ ಕಮ್ಯುನಿಸ್ಟರಿಗೂ ನಡುವೆ ನಡೆದ ತತ್ವ ನಿರ್ಣಾಯಕ ಯುದ್ಧವೆಂದು ಅನೇಕರು ತಿಳಿದಿರಬಹುದು. ಆದರೆ ಇಂದು ಅದು ಶುದ್ಧ ಸುಳ್ಳೆಂಬುದನ್ನು ಚೀನೀಯರಿಂದಲೇ ತಿಳಿಯಬಹುದಾಗಿದೆ. ಚಿಯಾಂಗರು ಅಮೇರಿಕದ ಡಾಲರಶಾಹಿಯ ಅಡಿಯಾಳೆಂಬುದು ಅಗಲೇ ಜಗದ್ವಿದಿತವಾಗಿದೆ. ವರ್ಷಗಟ್ಟಲೆ ಯುದ್ಧದಲ್ಲೇ ಕಾಲ ಕಳೆಯುತ್ತಿದ್ದು ದೇಶ ಹಿತದ ಕಾರ್ಯವೊಂದನ್ನೂ ಮಾಡದಿರುವದರಿಂದ ಅವರ ಸರಕಾರವೀಗ ದಿನೇ ದಿನೇ ಅಪ್ರಿಯವಾಗುತ್ತಿದೆಯೆಂದು ತಿಳಿಯುತ್ತದೆ. ಪ್ರಾರಂಭದಶೆಯಲ್ಲಿ ಬಂಡವಾಲಶಾಹಿ ಮತ್ತು ಸಾಮ್ಯವಾದಿಗಳ ಖಾಡಾಖಾಡಿಯೆನಿಸಿದ ಸಂಗ್ರಾಮವಿಂದು 'ಬಡವರ ಬವರ'ವೆನಿಸುತ್ತಿದೆ. ನಾಗರಿಕ ಹಕ್ಕು ಬಾಧ್ಯತೆಗಳು ಪ್ರಜಾಪ್ರಭುತ್ವ ತತ್ವಾನುಗುಣವಾಗಿ ಕೊಡದಿರುವ ಕಾರಣ ಚೀನೀಯರಿಂದು ಸಾಮಾಜಿಕ ಜೀವನದಲ್ಲಿಯ ತೊಡಕುಗಳನ್ನು ಬಿಡಿಸಲಾರದೆ ನಿರಾಶರಾಗಿ ಮುಳಿದು ದಂಗೆಗಾರಂಭಿಸಿದ್ದಾರೆ. ಚೀನೀ ರಾಷ್ಟ್ರೀಯರಿಂದು ತಮ್ಮ ಬೇಡಿಕೆಗಳನ್ನು ಸರಕಾರದೆದುರಿಗಿಟ್ಟಿದ್ದಾರೆ. ಈ ಅರಾಜಕ ಪರಿಸ್ಥಿತಿಯನ್ನು ಕೆಂಪುದಂಡಿನವರು (ಕಮ್ಯೂನಿಸ್ಟ್) ತಮ್ಮ ಅನುಕೂಲಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ.

೧೯೧೧ ರಲ್ಲಿ ಚೀನೀ ಪ್ರಜಾರಾಜ್ಯ ಸ್ಥಾಪಿತನಾಯಿತು. ಅಂದಿನಿಂದ ಇಂದಿನ ವರೆಗೆ ಪ್ರಾಂತೀಯ ಗವರ್ನರರು ಮನಸೋಇಚ್ಛೆ ಆಡಳಿತ ಸಾಗಿಸುತ್ತ ಬಂದಿದ್ದಾರೆ. ದೇಶದಲ್ಲಿ ಕ್ಷಾಮ ಹಬ್ಬುತ್ತಿದೆ. ಅಲ್ಲಲ್ಲಿ ಸ್ವಂತ ಸೈನ್ಯಗಳು ಹುಟ್ಟಿ ಕೊಲೆ ಸುಲಿಗೆ ನಡೆಸಲಾರಂಭಿಸಿವೆ. ಇದರಿಂದ ಇಡೀ ದೇಶದಲ್ಲಿ ಶಾಂತಿಯಿಲ್ಲದಂತಾಗಿದೆ. ಶಾನ್ಸಿಯಲ್ಲಿ ಗವರ್ನರನಾದ ಜನರಲ್ ಯೆನ್ಸಿಶಾನನು ನಡೆಸಿದ ದಬ್ಬಾಳಿಕೆ, ಕಂಡಾಬಟ್ಟೆ ತೆರಿಗೆವಸೂಲಿ, ಒತ್ತಾಯದಿಂದ ಜನರನ್ನು ಮಿಲಿಟರಿಗೆ ಸೇರಿಸುವುದು ಮುಂತಾದ ಕೃತ್ಯಗಳಿಂದ ಅವರ್ಣನೀಯವಾಗಿದೆಯೆಂದು "ಯುನೈಟೆಡ್ ನೇಶನ್ಸ್ ವರ್ಲ್ಡ್"ನಲ್ಲಿ ಸಿ. ವೈ. ಡಬ್ಲ್ಯು ಮೆಂಗರು ಬರೆಯುತ್ತಾರೆ. ಇದರ ಪರಿಣಾಮವಾಗಿ ಎದ್ದ ದಂಗೆಗಳಲ್ಲಿ ಸೀಕ್ಯಾಂಗಿನದೇ ಬಹುದೊಡ್ಡದು. ಅದರ ಗವರ್ನರನು ಜನರಲ್ ಟ್ಯಾವೆನ್ ಹ್ಯೂ ಎಂಬಾತನು. ಈತನು ಮಹಾಸ್ವಾರ್ಥಿಯೆನಿಸಿಕೊಂಡು ಅಫೀಮಿನ ವ್ಯಾಪಾರವನ್ನು ತನ್ನ ಸ್ವಂತ ಅಧಿಕಾರದಲ್ಲಿಟ್ಟುಕೊಂಡನು; ಬೆಳೆವವರಿಗೆ ಸೊನ್ನೆ, ಗವರ್ನರನ ಪಕ್ಷದವರಿಗೆ ಬೆಳೆನಪಾಲು—ಹೀಗಿದೆ ಸಮಾಚಾರ! ಇದರ ಮೇಲೆ ಪ್ರಾಂತವೊಂದರ ಆಡಳಿತ ನೆಟ್ಟಗಿಲ್ಲವೆಂದು ಯಾವನಾದರೂ ಬರೆದರೆ ಅವನಿಗೆ ತಲೆದಂಡ! ದಾರಿದ್ರ್ಯ ತುಂಬಿ ತುಳುಕುತ್ತಿದೆ ಎಲ್ಲೆಲ್ಲೂ. ಇಂತಹ ಸಮಯದಲ್ಲಿ ಸರಕಾರದ ಛಲ ಯುದ್ಧ ನಡೆದಿದೆ! ಕಮ್ಯುನಿಸ್ಟರ ಹೆದರಿಕೆ ಹಾಕಿ ಇಂದಿನ ಕೋಮಿಂಟಾಂಗ ಸರಕಾರ ತನ್ನ ಹೆಗ್ಗಣಗಳಂತಹ ಅಧಿಕಾರಿಗಳಿಗೆ ಬೆಂಬಲವೀಯುತ್ತ ಜನರನ್ನು ದುಃಖಕ್ಕೀಡುಮಾಡಿದೆ.

ಮಂಚೂರಿಯದ ಮಹತ್ವದ ನಗರವೂ ವಿದ್ಯುಚ್ಛಕ್ತಿ ಕೇಂದ್ರವೂ ಆದ ಕಿರಿನ್ ನಗರದ ರಕ್ಷಣೆಗೆ ಚಿಯಾಂಗ ಸರಕಾರವು ಭಗೀರಥ ಪ್ರಯತ್ನ ನಡೆಸುತ್ತಿದೆಯೆಂದು ಇಂದಿನ ಸುದ್ದಿ. ಆದರೆ ಕಮ್ಯೂನಿಸ್ಟರ ದಾಳಿಯ ರಭಸವೇನೂ ಕಡಿಮೆಯಾಗಿಲ್ಲವೆಂದು ಹೇಳಲಾಗಿದೆ. ಚಿಯಾಂಗ ಕೈಶೇಕರಿಕೆ ಹೀಗೆ ಛಲಕ್ಕೆ ಬಿದ್ದರೋ ತಿಳಿಯದಾಗಿದೆ. ಕಮ್ಯುನಿಸ್ಟರಿಗೆ ಪ್ರಾದೇಶಿಕ ಸ್ವಾಯತ್ತತೆ ಕೊಟ್ಟರೆಗೆಳೆ ತೀರಿಸಿ ಬಿಡಬಹುದಾಗಿತ್ತು. ಆ ಬುದ್ಧಿ ಅವರಿಗೆ ಹುಟ್ಟದೆ ದೇಶವಿಂದು ನರಕಪೀಡೆಗೆ ತುತ್ತಾಗಿದೆ.

### ಭಾರತಕ್ಕೆ ಜರ್ಮನಿಯ ತಜ್ಞರು

ಭಾರತ ಮತ್ತು ಬ್ರಿಟಿಶ ಸರಕಾರಗಳ ನಡುವೆ ಜರ್ಮನಿಯ ತಜ್ಞರನ್ನು ಭಾರತಕ್ಕೆ ಕರೆಸಿಕೊಳ್ಳುವ ವಿಷಯದಲ್ಲಿ ಒಡಂಬಡಿಕೆಯಾಯಿತು. ಅದರ ಪ್ರಕಾರ ೧೦ ಜನ ತಜ್ಞರು ಬೇಗನೆ ಇಲ್ಲಿಗೆ ಬರಲಿರುವರೆಂದು ಸುದ್ದಿ.

ಬರ್ಲಿನಿನಲ್ಲಿಯ ಭಾರತೀಯ ಮಿಲಿಟರಿ ಪಂಗಡದ ಆರ್ಥಿಕ ಸಲಹೆಗಾರರಾದ ಶ್ರೀ ರಾಮಸ್ವಾಮಿಯವರ ಹೇಳಿಕೆಯ ಪ್ರಕಾರ ಮೊದಲಿನ ಗುಂಪಿನಲ್ಲಿ ವಾಹನ, ಕಟ್ಟಡ, ರೇಡಿಯೊ ರಾಸಾಯನಿಕ ಮತ್ತು ಉಕ್ಕಿನ ಕೈಗಾರಿಕೆ ಇವುಗಳಲ್ಲಿ ಪರಿಶ್ರಮ ಪಡೆದ ತಜ್ಞರಿರುವರಂತೆ. ಕ್ರಮೇಣ ಜರ್ಮನಿಯಿಂದ ಕರೆಸಿಕೊಳ್ಳಬಹುದಾದ ತಜ್ಞರ ಸಂಖ್ಯೆ ಇನ್ನೂ ನೂರಾಗಬಹುದು. ಜರ್ಮನಿಯ ಪತ್ರಿಕೆಗಳು, ಕೈಗಾರಿಕೆಯ ಕರ್ತರು, ವ್ಯಾಪಾರಿಗಳು ಮುಂತಾದವರು ಭಾರತದೊಡನೆ ಸಂಬಂಧ ಬೆಳೆಸಿಕೊಳ್ಳಲು ಆತುರರಾಗಿರುವರೆಂದು ತಿಳಿಯುತ್ತದೆ. ಪಂಗಡದ ಮುಖಂಡನಾದ ಕರ್ನಲ್ ಎಂ. ಎಸ್. ವಧಾಲಿಯನನ್ನು ಭಾರತವು ವಾಪಸು ಕರೆಸಿಕೊಂಡದ್ದೇಕೆಂಬುದು ತಿಳಿಯದೆಂದು ಶ್ರೀ ರಾಮಸ್ವಾಮಿಯವರ ಹೇಳಿಕೆ. ಆದರೆ ಪರಿಸ್ಥಿತಿಯನ್ನು ಕಣ್ಣಾರೆ ನೋಡಲು ಬ್ರಿಗೇಡಿಯರ್ ಕರಿಯಪ್ಪನವರು ಸದ್ಯದಲ್ಲೇ ಬರ್ಲಿನ್ನಿಗೆ ಭೆಟ್ಟಿ ಕೊಡುವರೆಂದು ಸುದ್ದಿಯಿದೆ. ಒಳ್ಳೆಯ ರೀತಿಯಿಂದ ಯೋಗ್ಯತಜ್ಞರನ್ನ ಕರೆಸಿಕೊಳ್ಳುವುದು ಭಾರತಕ್ಕೆ ಸರ್ವ ವಿಧದಿಂದಲೂ ಲಾಭಕರವಿದೆಯಾಗಿ ಕೇಂದ್ರ ಸರಕಾರವು ಈ ವಿಷಯದಲ್ಲಿ ತಕ್ಕ ಕಾರ್ಯವನ್ನು ಕೈಕೊಳ್ಳುವುದೆಂದು ನಂಬುತ್ತೇವೆ.

### ಕಮ್ಯೂನಿಸ್ಟರ ಬೇಟೆ

ಅಂತರ್‍ರಾಷ್ಟ್ರೀಯ ರಾಜಕಾರಣವಿಂದು ಹೇಗೆ ಬಂಡವಲಶಾಹಿ ಮತ್ತು ಸಮಾಜವಾದಿಗಳ ತಾಕಲಾಟದಿಂದ ಪ್ರಕ್ಷುಬ್ಧವಾಗಿದೆಯೆಂಬುದು ಸುವಿದಿತವಿದೆ. ಅಮೇರಿಕ ಮತ್ತು ರಶಿಯಗಳು ಮೇಲಿನ ತತ್ವಗಳ ಪುರಸ್ಕರ್ತರೆಂಬುದೂ ಸುಸ್ಪಷ್ಟ. ಈ ದ್ವೇಷ ಭಾವ ಬೆಳೆಯುತ್ತ ಹೋಗಿ ಎಂದು ಪೂರ್ವ ಪಶ್ಚಿಮಾರ್ಧ ಗೋಲಗಳನ್ನು ನೆತ್ತರಿನ ಕಾಳ್ಪುರದಲ್ಲಿ ಅದ್ದುವುದೋ ಹೇಳಲಸದಳವೆಂಬ ಅಂಜಿಕೆ ಅನೇಕ ಮುತ್ಸದ್ದಿಗಳ ತಲೆತಿನ್ನುತ್ತಿದೆ. ಮೊನ್ನಿನ ಸುದ್ದಿ ಹೀಗಿದೆ: ಸಿನೆಮಾ ತಯಾರಿಕೆಯ ಸುಪ್ರಸಿದ್ಧ ಕೇಂದ್ರವಾದ ಹಾಲಿವುಡ್ಡಿನಲ್ಲಿ ಕಮ್ಯೂನಿಸ್ಟರನ್ನ ಹುಡುಕಿ ತೆಗೆದು ಹೊರಗಟ್ಟುವ ಕೆಲಸ ನಡೆದಿದೆ. ಸರಕಾರಿ ನೌಕರರಾಗಿರುವವರಲ್ಲಿ ಯಾರಾದರೂ ಕಮ್ಯೂನಿಸ್ಟರಿದ್ದರೆಂದು ತಿಳಿದೊಡನೆ ಅವರನ್ನು ಮನೆಗೆ ಕಳುಹಲಾಗುವದು. ಇತ್ತ ಬ್ರಿಟನ್ನಿನ ಪಾರ್ಲಿಮೆಂಟಿನ ವಿರುದ್ಧ ಪಕ್ಷದವರು ಕಮ್ಯುನಿಸ್ಟ್ ಪಕ್ಷವನ್ನು ಕಾಯಿದೆ ಬಾಹಿರವೆಂದು ಸಾರಬೇಕಾಗಿ ಸೂಚನೆ ತಂದರೆಂದೂ ಸರಕಾರ ಅದನ್ನು ಮಾನ್ಯಮಾಡಲಿಲ್ಲವೆಂದೂ ತಿಳಿದುಬಂದಿದೆ. ಬ್ರಿಟಿಶರಿಗೆ ಇರುವ ಜಾಣ್ಮೆ ಅಮೇರಿಕನ್ನರಿಗಿರದಂತೆ ತೋರುವದಿಲ್ಲ. ಸಿರಿಯಿಂದ ಕೊಬ್ಬಿದ ಅಮೇರಿಕಕ್ಕಿಂದು ಕಣ್ಣು ಕಾಣದಾಗಿದೆ. ಬ್ರಿಟಿಶ ಪಾರ್ಲಿಮೆಂಟಿನ ವಿರುದ್ಧ ಪಕ್ಷದವರಾದ ಚರ್ಚಿಲ ಮತ್ತು ಕಂಪನಿಯು ಕಮ್ಯೂನಿಸ್ಟರ ವಿರುದ್ಧ ಹಾಗಿ ಸೂಚನೆ ತಂದುದು ಅವರ ಕಿರುನೋಟವನ್ನು ತೋರಿಸುತ್ತದೆ. ಈ ವಿಷಯದಲ್ಲಿ ಬ್ರಿಟನ್ನಿನ "ಈವನಿಂಗ್ ಸ್ಟ್ಯಾಂಡರ್ಡ್"ನಲ್ಲಿ ಹೇಳಿರುವಂತೆ ಯಾವ ಪ್ರಜಾಪ್ರಭುತ್ವಕ್ಕೇ ಅಗಲಿ ಉಳಿದ ರಾಷ್ಟ್ರಗಳನ್ನು ಮತ್ತು ಅವುಗಳ ವಿಶಿಷ್ಟ ತತ್ವಗಳನ್ನು ಹೀಗಳೆಯಲು ಯಾವ ನೈತಿಕ ಹಕ್ಕಿದೆ? ಎಂದು ನಾವಾದರೂ ಕೇಳಬೇಕಾಗುತ್ತದೆ.

### ಬುಡಾಪೆಸ್ಟಿನಲ್ಲಿ ಬೆದರಿಕೆ

ಕಳೆದ ಕೆಲವು ದಿವಸಗಳಿಂದ ಹಂಗೇರಿಯ ರಾಜಧಾನಿಯಾದ ಬುಡಾಪೆಸ್ಟಿನಲ್ಲಿಯ ಭೀತ ನಾಗರಿಕರು "ಕೆಟ್ಟ ದಿನ"ಕ್ಕೆ ಸಲಕರಣೆಗಳನ್ನು [illegible] ಕೂಡಿಸಿಕೊಳ್ಳುತ್ತಿದ್ದಾರೆಂದು ಸುದ್ದಿಯಿದೆ. ಅಮೇರಿಕ ರಶಿಯ ಮತ್ತು ಪಾಶ್ಚಾತ್ಯ ಪ್ರಭುತ್ವಗಳ ನಡುವೆ ಬೇಗನೆ ಸಂಗರ ಉಂಟಾಗಲಿದೆಯೆಂಬ ಜನಜನಿತ ಕಲ್ಪನೆಯೇ ಕಾರಣವೆಂದು ತಿಳಿಯುತ್ತದೆ. ದಿನೇ ದಿನೇ ಹೆಚ್ಚುತ್ತಿರುವ ಈ ಗಲಾಟೆಯಿಂದ ಅಧಿಕಾರಿಗಳು ಗಾಬರಿಗೊಂಡು ಪತ್ರಿಕೆಗಳ ಮೂಲಕ ಇಂತಹ ಕಟ್ಟು ಸುದ್ದಿ ಬಿಡಬೇಕೆಂದು ಎಚ್ಚರಿಕೆ ಕೊಟ್ಟಿದ್ದಾರೆ. ಇಂತಹ ಸುದ್ದಿ ಅಸಂಭವವೆಂದು ಹೇಳಲಾಗದಿರುವಂಥ ಪರಿಸ್ಥಿತಿಯಿದೆಯೆಂದು ಅಂತರಾಷ್ಟ್ರೀಯ ರಾಜಕಾರಣಿಗಳು ಬಲ್ಲರು. ಇದು ಗಾಳಿಸುದ್ದಿ ಬೀಸುತ್ತಿದೆಯೆಂಬುದನ್ನು ಸೂಕ್ಷ್ಮವಾಗಿ ತಿಳಿಸುತ್ತದೆ. ಕಪ್ಪು ಪಕ್ಷದ ಚಂದ್ರನಂತೆ ದಿನೇ ದಿನೇ ಕ್ಷೀಣವಾಗುತ್ತಿರುವ ಅಮೇರಿಕ–ರಶಿಯಗಳ ಗೆಳೆತನ ಇಂತಹ ಕಲ್ಪನೆಗೆ ಆಸ್ಪದ ಕೊಟ್ಟರೆ ಆಶ್ಚರ್ಯವಿಲ್ಲ. ಆಗಲೇ ಕಳೆದ ಮಹಾಯುದ್ಧದಲ್ಲಿ ಕಷ್ಟನಷ್ಟಗಳಿಂದ ಕುಂದಿ ಹೋದ ನಾಗರಿಕರು ತಲೆ ಸರಿಸಿಕೊಳ್ಳಲು ಹಗ್ಗಗಳತ್ತ ಓಡುವುದು ಅಸಹಜವಲ್ಲ. ಜನತೆಯಿಂದು ಯುದ್ಧಕ್ಕೆ ಬೇಸತ್ತಿದೆಯೆಂಬುದಕ್ಕೆ ಇದೊಂದು ನಿದರ್ಶನ.

### ಫ್ರಾಂಕೋ ಸರಕಾರವನ್ನು ಉರುಳಿಸುವ ಪ್ರಯತ್ನ

ಸ್ಪೆಯಿನ ದೇಶದಿಂದ ಹೊರಗೆ ಹಾಕಲ್ಪಟ್ಟ ಕ್ಯಾಥೊಲಿಕ್ ರಾಜಸತ್ತಾಪಕ್ಷದ ಮುಖಂಡನಾದ ಡಾನ್ ಜೋಸ್‌ಮೇರಿಯ ಜಿಲ್ ರಾಬಲ್ಸ ಎಂಬವನು ಸಂಯುಕ್ತ ಸಂಸ್ಥಾನದ ಸ್ಟೇಟ್ ಸೆಕ್ರೆಟರಿಯವರಾದ ಜನರಲ್ ಮಾರ್ಶಲ್ಲರನ್ನು ಕಂಡು ಫ್ರಾಂಕೋ ಸರಕಾರವನ್ನು ಉರುಳಿಸಲು ಸಹಾಯ ಕೇಳಿದನೆಂದು ತಿಳಿಯುತ್ತದೆ. ಸ್ಪೆಯಿನ್ನಿನಲ್ಲಿ ಹೇಗೆ ಕೂಟ ಯೋಧರು ಅಗಲೇ ಫ್ರಾಂಕೋ ಸರಕಾರದ ವಿರುದ್ಧ ದಾಳಿಗಾರಂಭಿಸಿದ್ದಾರೆಂಬುದನ್ನು ಹಿಂದೆಯೇ ಹೇಳಿದ್ದೇವೆ. ಅದೇ ಮಾರ್ಗದಲ್ಲಿ ಇಂದು ರಾಬಲ್ಸನು ಹೊರಟಿದ್ದು ತನ್ನನಾಡಿನ ಆರ್ಥಿಕ ದುಃಸ್ಥಿತಿಯನ್ನು ನೀಗಿಸಲು ಅಮೇರಿಕದ ನೆರವು ಬೇಕೆಂಬ ನೆವಹೂಡಿರುವುದು ಸ್ಪೆಯಿನಿನ ಪರಿಸ್ಥಿತಿಗೆ ಕನ್ನಡಿ ಹಿಡಿಯುತ್ತದೆ. ಆದರೆ ಈ ಸಹಾಯಯಾಚನೆಗೆ ಬಹಳ ಜನ ರಾಜಸತ್ತಾವಾದಿಗಳ ಬೆಂಬಲವಿಲ್ಲವೆಂದೂ ಹೇಳಲಾಗುತ್ತಿದೆ. ಇದರ ಜೊತೆಗೆ ಒಂದು ಕಾಗದದಲ್ಲಿ ಸ್ಪೆಯಿನಿನ ಶುದ್ಧಿಯಲ್ಲಿ ಮಂತ್ರಿ ಬೆವಿನ್ನರು ತಡೆಯಲಾರದಷ್ಟು ಸ್ಪೆಯಿನಿನ ಪರರಾಷ್ಟ್ರ ಸಂಗತಿಗಳಲ್ಲಿ ಕೈಹಾಕಿದ್ದರೆಂದು ಪ್ರತಿಪಾದಿಸಲಾಗಿದೆ. ಇದರ ನಡುವೆ ಬ್ರಿಟಿಶ ಮತ್ತು ಅಮೇರಿಕದ ಸಂ. ಸಂಸ್ಥಾನದ ಮಾದ್ರಿದ ಪ್ರತಿನಿಧಿಗಳು ೧೦೪ ಜನ ಜರ್ಮನ ರಾಜತಂತ್ರಜ್ಞರನ್ನು ಸ್ಪೆಯಿನ್ ಬಿಟ್ಟುಕೊಡಬೇಕೆಂದು ಕೇಳಿದ್ದಾರೆ. ಅಂತೂ ಸ್ಪೆಯಿನ್‌ನಲ್ಲಿ ಕಿಡಿಯೆದ್ದು ತಯಾರಾಗುತ್ತಿದೆ. ಕೂಟಯೋಧರಿಂದ ಮೊದಲೇ ತಲೆನೋವಿಗೀಡಾಗಿದ್ದ ಫ್ರಾಂಕೋನಿಗೆ ಮತ್ತೊಂದು ಕಡೆಯಿಂದ ಗಂಡಾಂತರವೊದಗುವ ಲಕ್ಷಣ ಕಾಣುತ್ತಿದೆ.

### ವಿಶಿನಸ್ಕಿಯ ಮೇಲೆ ಮಾನನಷ್ಟ ಮೊಕದ್ದಮೆ

ಡೇವಿಡ್ ಜೆ. ಡಾಲಿನ್ ಮತ್ತು ಬೋರಿಸ್ ನಿಕೊಲೆವಸ್ಕಿ ಎಂಬಿಬ್ಬರು ಒಟ್ಟಾಗಿ "ಸೋವಿಯೆಟ್ ರಶಿಯದಲ್ಲಿ ಬಲಾತ್ಕಾರದ ದುಡಿಮೆ" ಎಂಬ ಹೆಸರಿನ ಒಂದು ಪುಸ್ತಕ ಬರೆದಿದ್ದಾರೆ. ಸಂ. ರಾ. ಸಂಘದಲ್ಲಿ ಅಕ್ಟೋಬರ ೨೫ ರಲ್ಲಿ ಮಾಡಿದ ಒಂದು ಭಾಷಣದಲ್ಲಿ ರಶಿಯದ ಪರದೇಶ ಮಂತ್ರಿಯಾದ ಎಂ. ವಿಶಿನಸ್ಕಿಯು ಅದನ್ನು ಸಿಕ್ಕಾಬಟ್ಟೆ ಬೈದು ಗ್ರಂಥಕರ್ತರು ಹೆಡ್ಡಮೂರ್ಖರೆಂದೂ ಕುಸಿಗಾರರೆಂದೂ ಹಿಟ್ಲರನ ಭಕ್ತರೆಂದೂ ಹೇಳಿದನೆಂದು ತಿಳಿಯುತ್ತದೆ. ಅದಕ್ಕೆ ಆಹ್ವಾನವೆಂದು ಗ್ರಂಥಕರ್ತರ ವಕೀಲರು ಎಂ. ವಿಶಿನಸ್ಕಿಗೊಂದು ಕಾಗದಬರೆದು ಅದರಲ್ಲಿ ಅವನು ಹೇಳಿದ್ದು ಸುಳ್ಳೆಂದೂ ಹಾಗೆನಿಂದಿಸಿದ್ದಕ್ಕಾಗಿ ೧೦ ಲಕ್ಷ ಡಾಲರಿನಷ್ಟು ಮೊಕದ್ದಮೆ ಮಾಡುವುದಾಗಿಯೂ ಬರೆಯಲಾಗಿದೆಯೆಂದು ಸುದ್ದಿ. ಹಾಗೆ ಮಾನನಷ್ಟ ಮೊಕದ್ದಮೆಗೆದುರಾಗಲು ವಿಶಿನಸ್ಕಿ ತನ್ನ ಪ್ರತಿನಿಧಿತ್ವದ ವಿಶೇಷ ರಕ್ಷಣೆಯನ್ನು ತೆಗೆದುಹೊಗೆದು ನಿಲ್ಲಲು ತಯಾರಿದ್ದಾನೆಯೆ? ಎಂದೂ ಕೇಳಲಾಗಿದೆ.

---

ಬ್ರಿ. ಕಾಂಸರ್ವೇಟಿವ ಪಕ್ಷದ ಚುನಾವಣೆ ಉಪಸಮಿತಿಯು ಮೊನ್ನಿನ ನಗರಸಭೆಗಳ ಚುನಾವಣೆಗಳಲ್ಲಿ ೭೦೦ ಸ್ಥಳಗಳನ್ನು ಕಳೆದುಕೊಂಡದ್ದಕ್ಕೆ ಮಹತ್ವ ಕೊಡಲಿಲ್ಲವೆಂದು ತಿಳಿಯುತ್ತದೆ.

# ಅಮೇರಿಕದ ಜೀವನಸೌಕರ್ಯಗಳು

ಲೇ:— ಶ್ರೀ ನಾಡಿಗ ಕೃಷ್ಣಮೂರ್ತಿ ನ್ಯೂಯಾರ್ಕ

--- ವಿಶೇಷ ಲೇಖನ ೭ ---

## ಆಹಾರ ಸಿಕ್ಕುವ ಸ್ಥಳಗಳು

### ಕೆಫೇ ಟೇರಿಯಾಸ್

ನಮ್ಮ ದೇಶದಲ್ಲಿರುವಂತೆ ಇಲ್ಲಿಯ ಉಪಹಾರ ಮಂದಿರಗಳಲ್ಲಿ ಮಾಣಿಗಳಿರುವದಿಲ್ಲ. ನಾವೇ ಮಾಣಿಗಳಾಗಬೇಕು. ಮೊದಲು ನಮಗಾಗಿ ಇಟ್ಟಿರುವ ಪಟ್ಟಿ, ಚಾಕು, ಚಮಚ, ಟವಲ್ ತೆಗೆದುಕೊಂಡು ಆಹಾರವನ್ನಿಟ್ಟಿರುವ ಸ್ಥಳಕ್ಕೆ ಹೋಗಿ ನಮಗೆ ಬೇಕಾದ ಆಹಾರವನ್ನು ತೆಗೆದುಕೊಂಡು ಗಲ್ಲೆಯ ಹತ್ತಿರ ಬಂದು ದುಡ್ಡು ಕೊಟ್ಟು, ನಮಗಾಗಿ ಇಟ್ಟಿರುವ ಮೇಜಿನ ಮೇಲೆ ಹೋಗಿ ಇಟ್ಟುಕೊಂಡು ಊಟ ಮಾಡಬೇಕು. ಇಲ್ಲಿ ಇನಾಮು ಕೊಡುವ ಪದ್ಧತಿ ಇಲ್ಲ.

### ಡ್ರಗ್ ಸ್ಟೋರ್

ಈ ಅಂಗಡಿಯಲ್ಲಿ ಔಷಧ ಅನೇಕ ಸಾಮಾನುಗಳು ಸಿಕ್ಕುವಂತೆ, ಕಾಫಿ, ಹಾಲು, ಹಣ್ಣಿನ ರಸ, ಸ್ಯಾಂಡ್ ವಿಚಸ್ ಸಿಕ್ಕುತ್ತವೆ. ಸ್ವಲ್ಪ ಆಹಾರ ಬೇಕಾದಲ್ಲಿ, ಇಲ್ಲಿಗೆ ಹೋಗಬಹುದು. ಕಾಫಿಗೆ ಬೆಲೆ ೫ ಸೆಂಟ್ಸಾದರೂ, ಇಲ್ಲಿ ಕೆಲವು ಕಡೆ ೧೦ ಸೆಂಟ್ಸ ಕೊಡಬೇಕು. ಇಲ್ಲಿಯೂ ಇನಾಮು ಪದ್ಧತಿ ಇದೆ.

### ಅಟೋಮ್ಯಾಟ್

ಇದು ಅಮೇರಿಕದ ಆಧುನಿಕ ಉಪಹಾರಗೃಹ. ಇಂತಹವುಗಳನ್ನು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನೋಡಬಹುದು. ಗಾಜಿನ ಸಣ್ಣ ಸಣ್ಣ ಕಿಡಿಕಿಗಳಲ್ಲಿ ಆಹಾರವನ್ನಿಟ್ಟಿರುತ್ತಾರೆ. ಅದರ ಹಿಂದೆ ಬೆಲೆಯನ್ನು ತಿಳಿಸುವ ಚೀಟಿ ಇರುತ್ತದೆ. ಕಿಟಕಿಯ ಮೇಲೆ ಒಂದು ಸಣ್ಣ ತೂತಿರುತ್ತದೆ. ಆ ಆಹಾರಕ್ಕಾಗುವ ಹಣವನ್ನು ತೂತಿನಲ್ಲಿ ಹಾಕಿದ ಕೂಡಲೇ, ಆ ಗಾಜಿನ ಕಿಟಕಿ ಬಾಗಿಲು ತೆರೆಯುತ್ತದೆ ತನ್ನಷ್ಟಕ್ಕೆ ತಾನೇ. ಅದನ್ನು ತೆಗೆದುಕೊಂಡು ಹೋಗಿ ಮೇಜಿನ ಮೇಲಿಟ್ಟುಕೊಂಡು ತಿನ್ನಬೇಕು. ಕಾಫಿಗೂ ಹಾಗೆ. ಸಲ್ಲಿಯ ತೆರನಾದ ಒಂದು ಕೊಳವೆಯಿದೆ. ತಿರುವು ತಿರುಗಿಸಿದ ಕೂಡಲೇ ಮೊದಲು ಡಿಕಾಕ್ಷನ್ ಆಮೇಲೆ ಹಾಲು ಬೀಳುತ್ತದೆ. ಅದಕ್ಕೆ ಮೇಜಿನ ಮೇಲಿಟ್ಟಿರುವ ಸಕ್ಕರೆ ಹಾಕಿಕೊಂಡು ಕಾಫಿ ಕುಡಿಯಬೇಕು. ಇಲ್ಲಿಯೂ ಇನಾಮು ಕೊಡುವ ಪದ್ಧತಿಯಿಲ್ಲ.

### ಡೈನಿಂಗ ರೂಮ್ಸ

ಈ ಊಟದ ಮನೆಗಳು ಹೋಟೆಲುಗಳಲ್ಲಿ, ಕೆಲವು ರೆಸ್ಟಾರೆಂಟುಗಳಲ್ಲಿ, ಮತ್ತು ರೇಲ್ವೆ ಸ್ಟೇಷನ್ನುಗಳಲ್ಲಿ ಇರುವುದನ್ನು ಕಾಣಬಹುದು. ಇಲ್ಲಿ ೧೦ ಸೆಂಟ್ಸಗಳನ್ನು ಇನಾಮು ಕೊಡಬೇಕು.

### ಟೆಲಿಫೋನ್

ತನ್ನಷ್ಟಕ್ಕೆ ತಾನೆ ನಡೆಯುವ ಟೆಲಿಫೋನುಗಳಿವೆ. ಇವನ್ನು ಹೇಗೆ ಉಪಯೋಗಿಸಬೇಕೆಂಬ ಬಗ್ಗೆ ಅದರ ಮೇಲೆಯೇ ಬರೆದಿರುತ್ತದೆ. ೫ ಸೆಂಟ್ಸ ಎಂದು ಬರೆದಿರುವ ತೂತಿನಲ್ಲಿ ನಾಣ್ಯ ಹಾಕಿದ ಕೂಡಲೇ ನಿಮಗೆ ಕಿಕ್ ಎಂಬ ಶಬ್ದ ಕೇಳಿಸುತ್ತದೆ. ಆಗ ನೀವು ಯಾರಿಗೆಬೇಕೋ ಅವರ ನಂಬರಿಗೆ ಫೋನ ಮಾಡಬಹುದು. ಉದಾಹರಣೆಗೆ ನಾಡಿಗ ಕೃಷ್ಣಮೂರ್ತಿ University 7—4325 ಈ ನಂಬರಿಗೆ ಕರೆಯಬೇಕೆಂದು ಇಟ್ಟುಕೊಳ್ಳೋಣ ಮೊದಲು U ಅಕ್ಷರವನ್ನು ತಿರುಗಿಸಬೇಕು. ನಂತರ N ಅಕ್ಷರ, ಆಮೇಲೆ ನಂಬರುಗಳು. ಕೆಲವು ನಗರಗಳಲ್ಲಿ ಬರೀ ನಂಬರುಗಳಿರುತ್ತವೆ. ಅಕ್ಷರಗಳಿರುವದಿಲ್ಲ. ಕೆಲವು ನಗರಗಳಲ್ಲಿ ಹಣಕೊಡಬೇಕಾಗಿಲ್ಲ. ಎಲ್ಲ ಟೆಲಿಫೋನ ಬೂಥಗಳಲ್ಲಿ ಮಾರ್ಗದರ್ಶನದ ಪುಸ್ತಕವಿರುತ್ತದೆ! ಮಾರ್ಗದರ್ಶನ ಪುಸ್ತಕ ಎರಡು ರೀತಿಯವು ಇವೆ: ಮೊದಲನೆಯದು ಹೆಸರಿನ ಪ್ರಕಾರ; ಎರಡನೆಯದು Classified Telephone Directory ವೈದ್ಯರನ್ನು ಕರೆಯುವಾಗ Physicians ಎಂಬಕಡೆನೋಡಿದ ತಕ್ಷಣ ನಂಬರು, ವಿಳಾಸ ಎಲ್ಲಾ ಸಿಕ್ಕುತ್ತದೆ.

### ಟೆಲಿಗ್ರಾಫ್

ಅಮೇರಿಕ ದೇಶದಲ್ಲಿ ತಂತಿಯು ಸರಕಾರಕ್ಕೆ ಸೇರಿಲ್ಲ. Western Union ಎಂಬ ಸ್ವಂತಸಂಸ್ಥೆ ಇದರ ಮೇಲ್ವಿಚಾರಣೆ ಮಾಡುತ್ತದೆ. ಊರಿನಲ್ಲಿ ಇದರ ಆಫೀಸಿದೆ. ಕೆಲವು ಸಣ್ಣ ಸ್ಥಳಗಳಲ್ಲಿ ಟೆಲಿಫೋನ್ ಮುಖಾಂತರ Western Union ಗೆ ಫೋನ್ ಮಾಡಿ, ತಂತಿ ಕಾರು ಮಾಡಿಸುತ್ತಾರೆ. ಹಾಗೇ ಫೋನ್ ಉಪಯೋಗಿಸಲು ಸ್ವಲ್ಪ ಹಣಕೊಡಬೇಕು. ದೊಡ್ಡ ರೇಲ್ವೆ ಸ್ಟೇಷನ್ನುಗಳಲ್ಲಿ ಮತ್ತು ಹೋಟೇಲುಗಳಲ್ಲಿ ನೇರವಾಗಿ ವೆಸ್ಟರ್ನ Union ಗೆ ತಾರುಮಾಡುವ ...

ಈ ಟೆಲಿಗ್ರಾಮುಗಳ ದರ ಶಬ್ದಗಳ ಮೇಲೆ ಅವಲಂಬಿಸುತ್ತದೆ. ಸಾಮಾನ್ಯವಾಗಿ ಹತ್ತು ಶಬ್ದಗಳ ತಾರು ಕಳುಹಿಸುವದಕ್ಕೆ ಎಂದಿದೆ. ಕಳುಹಿಸುವವರ ಹೆಸರು ವಿಳಾಸಕ್ಕೆ ಚಾರ್ಜು ಮಾಡುವದಿಲ್ಲ. ಮೂರು ವಿಧವಾದ ತಾರುಗಳನ್ನು ಕಳುಹಿಸಬಹುದು Night letter, Day letter, Delayed Telegram ಎಂದು. Day letter ತಾರಿಗೆ ಬೆಲೆ ಜಾಸ್ತಿ. ರಾತ್ರಿಯ ತಾರಿನಲ್ಲಿ ೫೫ ಶಬ್ದಗಳಿರಬಹುದು. ದರವೂ ಕಡಿಮೆ.

ಪರದೇಶಗಳಿಗೆ ಕಳುಹಿಸುವ ಕೇಬಲ್‌ಗ್ರಾಂ ಮತ್ತು ರೇಡಿಯೋ ಗ್ರಾಮುಗಳು The Commercial Cable Company, Macky Radio, ಮತ್ತು Radio Corporation of America ಮುಖಾಂತರ ಕಳುಹಿಸಲ್ಪಡುತ್ತವೆ. ಒಂದು ವೇಳೆ ಈ ಆಫೀಸುಗಳ ಶಾಖೆಗಳು ಕೆಲವು ಸ್ಥಳಗಳಲ್ಲಿಲ್ಲದಿದ್ದರೆ, Western Union ಮುಖಾಂತರ, ಈ ಆಫೀಸುಗಳಿಗೆ ಹೋಗುತ್ತವೆ. ಶಬ್ದ ಒಂದಕ್ಕೆ ೨೦ ಸೆಂಟ್ಸ ಪರದೇಶದ ದರ.

### ಪೋಸ್ಟ ಆಫೀಸ್

ಪ್ರತಿಯೊಂದು ಚಿಕ್ಕದೊಡ್ಡ ಊರುಗಳಲ್ಲಿಯೂ ಟಪಾಲ್ ಕಚೇರಿಗಳಿವೆ. ಒಂದು ಕಾರ್ಡಿಗೆ 1 ಸೆಂಟ ಕವರಿಗೆ ೩ ಸೆಂಟ್ಸ. ಅಮೇರಿಕದಲ್ಲಿ ಓಡಾಡುವ Air Mail ವರಿಗೆ ೫ ಸೆಂಟ್ಸ. ಇಲ್ಲಿಂದ ಪರದೇಶಕ್ಕೆ ಹೋಗುವ Air letter ದ ಬೆಲೆ ೧೦ ಸೆಂಟ್ಸ. ಇಂಡಿಯಾಕ್ಕೆ ಕವರಿನಲ್ಲಿ ಹಾಕಿದರೆ ೧/೨ ಔನ್ಸಿಗೆ ೨೫ ಸೆಂಟ್ಸ. ಇಂಗ್ಲೆಂಡ ಮತ್ತು ದಕ್ಷಿಣ ಅಮೇರಿಕಕ್ಕೆ ೧೫ ಸೆಂಟ್ಸ.

ಹಣ ಕಳುಹಿಸುವವರು ಮನಿಯಾರ್ಡರ್ ಮೂಲಕವಾಗಿ ಯಾಗಲೀ ಅಥವಾ ಪೋಸ್ಟಲ್ ನೋಟುಗಳನ್ನು ಕೊಂಡಾಗಲೀ ಕಳುಹಿಸಬಹುದು. ನಾವಿರುವ ಸ್ಥಳವನ್ನು ಬದಲಾಯಿಸಿದ ಕೂಡಲೇ ನಮ್ಮ ಬದಲಾಯಿಸಿದ ವಿಳಾಸವನ್ನು ಪೋಸ್ಟಾಫೀಸಿನಲ್ಲಿ ಹೋಗಿ ಬದಲಾಯಿಸಬೇಕು. ಆಗ ನಮ್ಮ ಬದಲಾಯಿಸಿದ ವಿಳಾಸಕ್ಕೆ ಕಾಗದವನ್ನು ಪೋಸ್ಟಾಫಿಸಿನವರೇ ಕಳುಹಿಸಿಕೊಡುತ್ತಾರೆ.

ನಮ್ಮಲ್ಲಿರುವ ಹಣವನ್ನು ಹೇಗೆ ಜೋಪಾನವಾಗಿಟ್ಟುಕೊಳ್ಳಬೇಕೆಂಬುದು ಇನ್ನೊಂದು ಸಮಸ್ಯೆ. Travellers ಚೆಕ್ಕುಗಳ ಮುಖಾಂತರ ನಮ್ಮ ಹಣವನ್ನು ನಾವು ತೆಗೆದುಕೊಂಡು ಹೋಗಬಹುದು. ಈ ಚೆಕ್ಕುಗಳನ್ನು ಬ್ಯಾಂಕುಗಳಲ್ಲಾಗಲೀ, ಅಥವಾ ಅಮೇರಿಕನ್ ಎಕ್ಸ್‌ಪ್ರೆಸ್ ಕಂಪನಿಯಲ್ಲಾಗಲೀ ಪಡೆಯಬಹುದು. ೧೦೦ ಡಾಲರ್ ಚೆಕ್ಕಿಗೆ ೭೫ ಸೆಂಟ್ಸ ಕೊಡಬೇಕು. ಚೆಕ್ಕು ಕೊಂಡವೇಳೆ ಅಲ್ಲಿಯೇ ಪ್ರತಿಯೊಂದು ಚೆಕ್ಕಿನ ಮೇಲೂ ಸಹಿ ಮಾಡಬೇಕು. ನಮಗೆ ಹಣಬೇಕಾದಾಗ ಪುನಃ ನಾವು ರುಜುಮಾಡಬೇಕು. ಈ ಚೆಕ್ಕುಗಳಿಗೆ ಹೋಟೇಲಾಗಲಿ ಅಂಗಡಿಯಾಗಲೀ ಬ್ಯಾಂಕಾಗಲೀ ಹಣಕೊಡುತ್ತವೆ.

ಹಣ ಹೆಚ್ಚಿದ್ದರೆ ಅದನ್ನು ಬ್ಯಾಂಕಿನಲ್ಲಿಡಬಹುದು. ೨೦೦ ಡಾಲರುಗಳಿಗಿಂತ ಕಡಿಮೆ ಬ್ಯಾಂಕಿನಲ್ಲಿಡಲು ... ಕೆಲವು ಬ್ಯಾಂಕುಗಳಲ್ಲಿ ಕಡಿಮೆ ಹಣವನ್ನು ಇಡಬಹುದು. ಇಂತಹ ಬ್ಯಾಂಕುಗಳಲ್ಲಿ ಹಲವು ಹಣ ತೆಗೆಯಬಯಸುವವರಿಗೆ ಸ್ವಲ್ಪ ಹಣ ಚಾರ್ಜಮಾಡುತ್ತಾರೆ. ಸೇವಿಂಗ್ಸ್ ಬ್ಯಾಂಕಿನಲ್ಲಿ ಹಣವಿಟ್ಟರೆ ನೂರಕ್ಕೆ ೧॥ ಬಡ್ಡಿಯನ್ನೂ ಕೊಡುತ್ತಾರೆ.

ಅಮೇರಿಕದಲ್ಲಿ ಸಾಮಾನು ಕೊಂಡುಕೊಳ್ಳುವಾಗ ಒಂದೇ ಬೆಲೆ ಹೇಳುತ್ತಾರೆ. ಕೆಲವು ಸಮಯದಲ್ಲಿ ಕಡಿಮೆ ಬೆಲೆಗೂ ದರ ಇಳಿಸುತ್ತಾರೆ. ನನ್ನ ಸ್ನೇಹಿತರೊಬ್ಬರು ನ್ಯೂಯಾರ್ಕಿನ ಸುಪ್ರಸಿದ್ಧವಾದ ಕ್ಯಾಮರಾ ಅಂಗಡಿಯೊಂದರಲ್ಲಿ ಒಂದು ಕ್ಯಾಮರಾ ತೆಗೆದುಕೊಂಡರು. ಅಂಗಡಿಯವನು ಮೊದಲು ಅದರ ಬೆಲೆ ಹೇಳಿದ್ದು ೨೫೦ ಡಾಲರ. ಕೊನೆಗೆ ಅದನ್ನು ೧೭೫ ಡಾಲರಿಗೆ ಬಿಕರಿಮಾಡಿದ.

ವಾಸಕ್ಕೆ ಮನೆ ಮಾಡಿದ ಹೊರತು ಬಟ್ಟೆ ನಾವೇ ಒಗೆದು ಕೊಳ್ಳಲು ಆಗುವುದಿಲ್ಲ. ಆದ್ದರಿಂದ ಬಟ್ಟೆಗಳನ್ನು ಹತ್ತಿರದ ಅಗಸರ ಮನೆಗೆ ಕೊಡಬೇಕಾಗುವುದು. ಟೆಲಿಫೋನು ಮಾಡಿದರೆ ಅವರೇ ಬಂದು ಬಟ್ಟೆಗಳನ್ನು ತೆಗೆದುಕೊಂಡು ಹೋಗಿ ಒಗೆದು ಶುಭ್ರಮಾಡಿ ಇಸ್ತ್ರಿಮಾಡಿ ಪುನಃ ತಂದುಕೊಡುತ್ತಾರೆ. ಒಬ್ಬೊಂದು ಅರಿವೆಗೂ ಹಣ ನಿಗದಿಮಾಡಿದ್ದಾರೆ. ನಾವೇ ಅರಿವೆಗಳನ್ನು ತೆಗೆದುಕೊಂಡು ಹೋಗಿ ಅಂಗಡಿಗೆ ಕೊಟ್ಟು, ಒಗೆದಾದಮೇಲೆ ತಂದು ಕೊಂಡರೆ ದರವನ್ನು ನೂರಕ್ಕೆ ೨೦ ರಂತೆ ಕಡಿಮೆ ಮಾಡುತ್ತಾರೆ.




## ಅಂತರ್ರಾಷ್ಟ್ರೀಯ ಕಾಯದೆಗೆ ಭಂಗ ತಂದ ಪಾಕಿಸ್ತಾನ!

(ಮೊದಲನೆ ಪುಟದಿಂದ ಬಂದುದು)

ದಲ್ಲಿ ಅವರು ಮಾಡಿದ್ದು ಅತ್ಯಂತ ಶ್ಲಾಘ್ಯವಾದ ಕಾರ್ಯ. ತಮ್ಮ ಸಂಘಟಿತ ಶಕ್ತಿಯಿಂದ ಅವರು ಹಾಗೆ ಮಾಡಲು ಶಕ್ತರಾದರು; ಅದಕ್ಕೂ ಹೆಚ್ಚಾಗಿ ತಮ್ಮ ದೇಶವನ್ನು ಹಾಳುಗೆಡಹಿ ಅಂಜಿಸಿ ಅದು ಪಾಕಿಸ್ತಾನವನ್ನು ಸೇರುವಂತೆ ಮಾಡಬಂದ ಕ್ರೂರರಾದ ದಾಳಿಕಾರರಿಂದ ಅದನ್ನು ಕಾಪಾಡಲು ಅವರು ಬದ್ಧಪ್ರತಿಜ್ಞರಾದದ್ದು ಅದಕ್ಕೆ ಕಾರಣ. ಭವಿಷ್ಯವು ಏನೇ ಹೇಳಲಿ, ಕಾಶ್ಮೀರದ ಕಣಿವೆಯ ಜನರು ಕಳೆದ ಕೆಲವು ದಿನಗಳಲ್ಲಿ ಸ್ತುತ್ಯವಾದ ಧೈರ್ಯವನ್ನೂ ಒಕ್ಕಟ್ಟು ಮತ್ತು ಸಂಘಟನೆ ಮಾಡಿಕೊಳ್ಳುವ ಶಕ್ತಿಯನ್ನೂ ತೋರಿಸಿದ್ದಾರೆ.

### ಹಿಂದುಸ್ತಾನಕ್ಕೆ ಪಾಠ

ಜಾತೀಯ ಜಗಳದಿಂದ ವಿಷಮಯವಾದ ಇಡೀ ಹಿಂದುಸ್ತಾನವು ಈ ಪಾಠವನ್ನು ಅರಿತರೆ ಬಹಳ ಒಳ್ಳೆಯದಾಗುತ್ತಿತ್ತು. ದೊಡ್ಡ ನಾಯಕರೆನಿಸಿದ ಶೇಖ ಅಬ್ದುಲ್ಲಾರ ಸ್ಫೂರ್ತಿಯಿಂದ ಕಣಿವೆಯ ಜನರಾದ ಹಿಂದು ಶೀಖ ಮುಸ್ಲಿಮರು ತಮ್ಮ ತಾಯ್ನಾಡನ್ನು ಕಾಪಾಡಲು ದಾಳಿಕಾರರನ್ನೆದುರಿಸಿ ಒಕ್ಕಟ್ಟಿನಿಂದ ನಿಂತರು. ಈ ಜನತಾ ಸಹಕಾರವಿಲ್ಲದಿದ್ದರೆ ನಮ್ಮ ದಂಡಿಗೆ ಏನನ್ನೂ ಮಾಡಲಾಗುತ್ತಿದ್ದಿಲ್ಲ.

ಈ ಬಿಕ್ಕಟ್ಟಿನ ಸಂಧಿಯಲ್ಲಿ ಶೇಖ ಅಬ್ದುಲ್ಲಾರನ್ನು ಆಡಳಿತ ಮೇಲಧಿಕಾರಿಯಾಗಿ ಮಾಡಿದ್ದಕ್ಕೆ ಕಾಶ್ಮೀರಕ್ಕೆ ಮಹಾರಾಜರು ಧನ್ಯವಾದಕ್ಕೆ ಪಾತ್ರರಾಗಿದ್ದಾರೆ. ಅದೊಂದು ಜಾಣತನದ ಕೆಲಸ; ಉಳಿದ ಅಳರಸರು ಇದನ್ನು ಅನುಕರಿಸಬಹುದು ತಮ್ಮ ಪ್ರಜೆಗಳನ್ನೇ ತಮ್ಮ ಸ್ವಾತಂತ್ರ್ಯದ ಕಾವಲುಗಾರರನ್ನಾಗಿ ಮಾಡಬಹುದು.

ಆದುದರಿಂದ ಕಾಶ್ಮೀರದ ಹೋರಾಟವು ಜನಪ್ರಿಯ ನಾಯಕರ ಕೈಕೆಳಗೆ ಜನತೆ ದಾಳಿಕಾರರ ವಿರುದ್ಧ ನಡೆಸುವ ಹೋರಾಟವೆಂಬುದನ್ನು ಮನವರಿಕೆ ಮಾಡಿಕೊಳ್ಳತಕ್ಕದ್ದು. ಈ ಹೋರಾಟದಲ್ಲಿ ನೆರವೀಯಲು ನಮ್ಮ ದಂಡು ಅಲ್ಲಿಗೆ ಸಾಗಿದೆ. ದಾಳಿಕಾರರಿಂದ ಕಾಶ್ಮೀರ ಮುಕ್ತವಾದ ಕೂಡಲೆ ಅಲ್ಲಿ ಇರಬೇಕಾದ ಅವಶ್ಯಕತೆ ಇಲ್ಲದಂತಾಗಿ ಕಾಶ್ಮೀರದ ಜನರ ಕೈಯಲ್ಲಿಯೇ ಅದರ ಮುನ್ನೆಲೆಯನ್ನು ಬಿಟ್ಟುಕೊಡಲಾಗುತ್ತದೆ.

### ಹಿಂದೀಯರು ಕಳೆದ ಗಂಡಾಂತರದ ದಿನಗಳು

ಕಾಶ್ಮೀರಕ್ಕಾಗಿ ಮಾತ್ರವಲ್ಲ; ಇಡೀ ಹಿಂದುಸ್ತಾನಕ್ಕಾಗಿ ನಾವು ಗಂಡಾಂತರದ ದಿನಗಳನ್ನು ಕಳೆದೆವು ಆ ಗಂಡಾಂತರವೀಗ ಕಡಿಮೆಯಾಗಿದೆ; ಆದರೆ ಅದಿನ್ನೂ ಪೂರ್ಣ ಮುಗಿದಿಲ್ಲ; ಮತ್ತೂ ಎಷ್ಟೋ ಗಂಡಾಂತರಗಳು ನಮ್ಮನ್ನೆದುರಿಸುತ್ತಿವೆ, ಏನು ಉಂಟಾದರೂ ಆಗಬಹುದು; ಆದುದರಿಂದ ನಾವು ಎಚ್ಚರರಾಗಿದ್ದು ಕಾರ್ಯ ಸಾಗಿಸಬೇಕು. ಈ ಸಿದ್ಧತೆಯ ಮೊದಲ ಹೆಜ್ಜೆಯೆಂದರೆ ನಾವು ಎಲ್ಲಬಗೆಯ ಹೋರಾಟವನ್ನು ನಿಲ್ಲಿಸಿ ಒಂದಾಗಿ, ಒಂದು ರಾಷ್ಟ್ರವಾಗಿ ಎದ್ದು ನಿಂತು ನಮ್ಮ ಸ್ವಾತಂತ್ರ್ಯಕ್ಕೆ ಅಂಜಿಕೆಯುಂಟುಮಾಡಬಹುದಾದ ಪ್ರತಿಯೊಂದು ಗಂಡಾಂತರವನ್ನೂ ಎದುರಿಸಲು ಸಿದ್ಧರಾಗಿ ನಿಲ್ಲಬೇಕು. ರಾಷ್ಟ್ರವು ಸಂಘಟಿತವಾಗಿದ್ದು ಒಳಗೆ ಶಾಂತಿಯಿದ್ದರೆ ಮಾತ್ರ ಹೊರಗಣ ಗಂಡಾಂತರವನ್ನು ಎದುರಿಸಬಹುದು.

ನಾವು ಕಾಶ್ಮೀರವನ್ನು ಹೊಕ್ಕ ದಾಳಿಗಾರರ ಮತ್ತು ಆಕ್ರಮಕ ಜನರಬಗ್ಗೆ ಮಾತಾಡುತ್ತೇವೆ. ಇವರು ಸುಸಜ್ಜಿತ ಶಸ್ತ್ರಾಸ್ತ್ರವುಳ್ಳವರು, ಚೆನ್ನಾಗಿ ತರಬೇತಿ ಹೊಂದಿದವರು. ಮತ್ತು ಸಮರ್ಥ ನಾಯಕರನ್ನುಳ್ಳವರು. ಇವರೆಲ್ಲರೂ ಪಾಕಿಸ್ತಾನ ಪ್ರದೇಶದಿಂದ ಗಡಿದಾಟಿ ಬಂದಿದ್ದಾರೆ. ಗಡಿನಾಡಿನಿಂದ ಇಲ್ಲವೆ ಪಶ್ಚಿಮ ಪಂಜಾಬಿನಿಂದ ಇವರು ಹೇಗೆ ಮತ್ತು ಏಕೆ, ಬಂದರು, ಹೇಗೆ ಅವರು ಅಷ್ಟು ಸುಸಜ್ಜಿತರಾಗಿದ್ದಾರೆ. ಎಂಬುದರ ಬಗ್ಗೆ ಪಾಕಿಸ್ತಾನ ಸರಕಾರವನ್ನು ಕೇಳಲು ನಮಗೆ ಹಕ್ಕಿದೆ. ಇದರಿಂದ ಅಂತರ್ರಾಷ್ಟ್ರೀಯ ಕಾಯದೆಯನ್ನು ಮೀರಿದಂತಾಗಲಿಲ್ಲವೇ? ನೆರೆನಾಡಿಗೆ ಅಹಿತಮಾಡಿದಂತಾಗಲಿಲ್ಲವೇ? ತನ್ನ ಪ್ರದೇಶವನ್ನು ದಾಟಿ ಹೋಗುವ ಸಶಸ್ತ್ರದಲವನ್ನು ತಡೆಯಲಾರದಷ್ಟು ಪಾಕಿಸ್ತಾನ ಸರಕಾರ ದುರ್ಬಲವಾಗಿರುವುದೇ? ಅಥವಾ ಅದು ಹೀಗಾಗಬೇಕೆಂದು ಬಯಸುವುದೇ? ಇವೆರಡನ್ನು ಉಳಿದರೆ ಮೂರನೆಯ ಮಾತಿಲ್ಲ.

ಆಗಲೇ ಒಳನುಗ್ಗಿದವರನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂದೂ ಮತ್ತೆ ಅವರು ಒಳಗೆ ಹೋಗದಂತೆ ತಡೆಹಿಡಿಯಬೇಕೆಂದೂ ನಾವು ಪದೇಪದೇ ಪಾಕಿಸ್ತಾನ ಸರಕಾರವನ್ನು ಕೇಳಿದ್ದೇವೆ. ಕಾಶ್ಮೀರಕ್ಕೆ ಹೋಗುವ ಹಾದಿಗಳು ಕಡಿಮೆ ಮತ್ತು ಆ ಮಾರ್ಗಗಳಲ್ಲಿ ಬಹಳ ಸೇತುವೆಗಳಿವೆ; ಆದುದರಿಂದ ಅಲ್ಲಿಗೆ ಹೋಗುವದನ್ನು ತಡೆಯುವದು ಬಹು ಸುಲಭ. ಆಕ್ರಮಣದ ಅಪಾಯವು ... ಬಳಿಕ ಕಾಶ್ಮೀರದಲ್ಲಿ ನಮ್ಮ ದಂಡು ಇಡುವ ಉದ್ದೇಶ ನಮಗಿಲ್ಲ.

ಕೊನೆಯದಾಗಿ ಕಾಶ್ಮೀರದ ಮುನ್ನೆಲೆಯನ್ನು ನಿರ್ಧರಿಸುವದು ಅಲ್ಲಿಯ ಜನತೆಯ ಕೈಯಲ್ಲಿದೆಯೆಂದು ನಾವು ಸಾರಿದ್ದೇವೆ. ಆ ಮಾತಿಗೆ ನಾವು ಬದ್ಧರಾಗಿದ್ದೇವೆ. ಮತ್ತು ಮಹಾರಾಜರು ಅದಕ್ಕೆ ಬೆಂಬಲ ಕೊಟ್ಟಿದ್ದಾರೆ. ಕಾಶ್ಮೀರದ ಜನರಿಗಷ್ಟೇ ಅಲ್ಲ, ಇಡೀ ಜಗತ್ತಿಗೇ ಹೇಳುತ್ತೇವೆ— ನಾವು ಎಂದೂ ಅದಕ್ಕೆ ತಪ್ಪಿ ನಡೆಯಲಾರೆವು, ನಡೆಯುವದಿಲ್ಲ. ಶಾಂತಿ, ಸುವ್ಯವಸ್ಥೆ, ಕಾಯದೆಯ ಮನ್ನಣೆ ಪುನಃ ನೆಲೆಗೊಂಡೊಡನೆ ಸಂ. ರಾ. ಸಂಘದವರಂತಹ ಅಂತರ್ರಾಷ್ಟ್ರೀಯ ಮಧ್ಯಸ್ಥದ ಮುಂದೆ ಮತಗಣನೆ ನಡೆಸಲು ನಾವು ತಯಾರಿದ್ದೇವೆ. ನ್ಯಾಯವಾಗಿ ಅದು ಜನರಿಂದ ತೀರ್ಮಾನಿಸಲ್ಪಡಬೇಕೆಂದು ನಮ್ಮ ಬಯಕೆ, ಮತ್ತು ನಾವು ಅವರ ತೀರ್ಪನ್ನು ಒಪ್ಪುತ್ತೇವೆ. ಇದಕ್ಕಿಂತ ಹೆಚ್ಚು ನ್ಯಾಯವಾದ, ಯೋಗ್ಯವಾದ ಕರಾರು ನನ್ನ ಊಹೆಗೆ ನಿಲುಕದು. ಇದರ ನಡುವೆ ದಾಳಿಕಾರರ ವಿರುದ್ಧ ಕಾಶ್ಮೀರದ ಜನರನ್ನು ಕಾಪಾಡುವೆನೆಂದು ನಾವು ಅವರಿಗೆ ಮಾತು ಕೊಟ್ಟಿರುವುದರಿಂದ ಅದರಂತೆಯೇ ನಾವು ನಡೆ...

ಕರ್ಮವೀರ
ಹರಿಜನ ಪುರವಣಿ

# ಹೊಸ ವಿಶ್ವವಿದ್ಯಾಲಯಗಳು

ಮೊ. ಕ. ಗಾಂಧಿ

ಕಳೆದಸಲದ ಹರಿಜನದಲ್ಲಿ ಮಹಾತ್ಮಾ ಗಾಂಧಿಯವರು "ಹೊಸ ವಿಶ್ವವಿದ್ಯಾಲಯಗಳು" ಎಂಬ ವಿಷಯದ ಮೇಲೆ ಬರೆದ ಲೇಖದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತಮಾಡಿದ್ದಾರೆ.

"ಇತ್ತೀಚೆಗೆ ಹೊಸ ವಿಶ್ವವಿದ್ಯಾಲಯ ಸ್ಥಾಪಿಸುವ ಹುಡುಗು ಹಬ್ಬಿದೆ. ಗುಜರಾತಿಗಳಿಗಾಗಿ ಗುಜರಾತ, ಮರಾಠಿಗರಿಗಾಗಿ ಮಹಾರಾಷ್ಟ್ರ, ಕನ್ನಡಿಗರಿಗಾಗಿ ಕರ್ನಾಟಕ, ಒರಿಯ ಜನರಿಗಾಗಿ ಒರಿಸಾ, ಅಸಾಮಿ ಜನರಿಗಾಗಿ ಅಸಾಮ, ಹೀಗೆ ಅನೇಕಾನೇಕ ವಿಶ್ವವಿದ್ಯಾಲಯಗಳ ಬೇಡಿಕೆಇದೆ. ಪ್ರಾಂತಗಳ ಜನರ ಮಾತೃಭಾಷೆ ಹಾಗೂ ಆ ಭಾಷೆಗಳನ್ನಾಡುವ ಜನರ ಉತ್ಕರ್ಷವಾಗಲು ಇಂಥ ಭಾಷಾವಾರು ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವ ಅವಶ್ಯಕತೆ ಇದೆ ಎಂದು ನಾನು ನಂಬುತ್ತೇನೆ.

ಆದರೆ ಅನಾವಶ್ಯಕ ಅವಸರದಿಂದ ಇಂಥ ಪ್ರಾಂತಿಕ ವಿಶ್ವವಿದ್ಯಾಲಯ ಸ್ಥಾಪಿಸುವದರಿಂದ ನಾವು ನಮ್ಮ ಗುರಿಯನ್ನು ಸಾಧಿಸಲು ಆತುರಪಡುತ್ತಿರುವೆವೆಂದು ನಾನು ಭಾವಿಸುವೆ. ಮೊದಲನೆಯ ಕೆಲಸವೆಂದರೆ ಭಾಷಾವಾರು ಪ್ರಾಂತರಚನೆ ಮಾಡಬೇಕು. ಆ ಬಳಿಕ ಪ್ರಾಂತದ ಆಡಳಿತ ಬೇರೆಯಾಗಿ ಸಾಗಹತ್ತಿದ ನಂತರ ಸ್ವಾಭಾವಿಕವಾಗಿ ಯಾವ ಪ್ರಾಂತದಲ್ಲಿ ವಿಶ್ವವಿದ್ಯಾಲಯವಿಲ್ಲವೋ ಅಲ್ಲಿ ವಿಶ್ವವಿದ್ಯಾಲಯ ಸ್ಥಾಪಿಸಲಾಗುವವು. ಮುಂಬಯಿ ಪ್ರಾಂತದಲ್ಲಿ ಗುಜರಾತಿ, ಮರಾಠಿ, ಕನ್ನಡ ಹೀಗೆ ಮೂರು ಭಾಷೆಗಳ ಪ್ರದೇಶ ಅಡಕವಾಗಿದೆ. ಮದ್ರಾಸು ಪ್ರಾಂತದಲ್ಲಿ ತಮಿಳು, ತೆಲುಗು, ಮಳೆಯಾಳ, ಕನ್ನಡ ಹೀಗೆ ನಾಲ್ಕು ಭಾಷೆಗಳ ಪ್ರದೇಶ ಸೇರಿಕೊಂಡಿದೆ. ಆಂಧ್ರ ದೇಶಕ್ಕೆ ಆಂಧ್ರ ವಿಶ್ವವಿದ್ಯಾಲಯವಿದ್ದರೂ ಅದಕ್ಕೆ ಆಂಧ್ರ ಪ್ರಾಂತವಿದ್ದರೆ ಇರಬೇಕಾದ ಸ್ಥಾನಮಾನ ಈಗ ಇಲ್ಲ. ಇದೇ ಮಾತನ್ನೇ ಅನ್ನಾಮಲೈ ವಿಶ್ವವಿದ್ಯಾಲಯದ ಬಗ್ಗೆಯೂ ಹೇಳಬಹುದು. ಈ ವಿಶ್ವವಿದ್ಯಾಲಯದಲ್ಲಿ ತಮಿಳು ಭಾಷೆಗೆ ಇರಬೇಕಾದ ಸ್ಥಾನವಿದೆ. ಎಂದು ಯಾರು ಹೇಳಬಲ್ಲರು? ವಿದೇಶ ಪ್ರಭುತ್ವದ ಬಲೆಯಿಂದ ಹಿಂದುಸ್ಥಾನವು ಬಿಡುಗಡೆಹೊಂದಿ ಈಗ ಎರಡು ತಿಂಗಳು ಮಾತ್ರ ಆಗಿದೆ.

ವಿಶ್ವವಿದ್ಯಾಲಯ ಸ್ಥಾಪಿಸಲು ಯೋಗ್ಯ ವಾತಾವರಣ ಉಂಟಾಗಬೇಕು. ಅಸಂಖ್ಯೆಯ ಶಾಲೆ ಕಾಲೇಜುಗಳು ವಿಶ್ವವಿದ್ಯಾಲಯ ಶಿಕ್ಷಣಕ್ಕೆ ವಿದ್ಯಾರ್ಥಿಗಳನ್ನು ಪ್ರಾಂತದ ಭಾಷೆಯಲ್ಲಿಯೇ ಶಿಕ್ಷಣ ಕೊಟ್ಟು ಅಣಿ ಮಾಡಬೇಕಾಗುವದು. ಅಂದರೆ ವಿಶ್ವವಿದ್ಯಾಲಯ ಸ್ಥಾಪನೆಗೆ ಅನುಕೂಲವಾಗುವದು. ಯೋಗ್ಯ ತಳಹದಿಯಿದ್ದರೆ ಮಾತ್ರ ಮೇಲಿನ ಭವ್ಯ ಕಟ್ಟಡ ನಿಲ್ಲಬಲ್ಲದು.

ನಾವು ರಾಜಕೀಯ ದೃಷ್ಟಿಯಿಂದ ಸ್ವತಂತ್ರರಾಗಿದ್ದರೂ ಪಾಶ್ಚಾತ್ಯ ಸೂಕ್ಷ್ಮ ವರ್ಚಸ್ಸಿನಿಂದ ಇನ್ನೂ ಸ್ವತಂತ್ರರಾಗಿಲ್ಲ. ವಿದೇಶ ಪ್ರಭುತ್ವ ಹೋದೊಡನೆಯೇ ವಿದೇಶೀಯರ ವರ್ಚಸ್ಸೂ ಅವರ ಭಾಷೆಯ ಪ್ರಭಾವವೂ ಹೋಗುವವೆಂದು ತಿಳಿಯುವದು ತಪ್ಪಾಗಬಹುದು. ಹೊಸ ವಿಶ್ವವಿದ್ಯಾಲಯ ಸ್ಥಾಪನೆಗಿಂತ ಮೊದಲು ನಾವು ಹೊಸದಾಗಿ ದೊರೆತ ಸ್ವಾತಂತ್ರ್ಯದ ಫಲವನ್ನು ಅನುಭವಿಸಬೇಕು. ವಿಶ್ವವಿದ್ಯಾಲಯಕ್ಕೆ ಭವ್ಯವಾದ ಅನೇಕ ಕಟ್ಟಡ, ದೊಡ್ಡಧನ ಸಂಗ್ರಹ ಇವಾವುವೂ ಬೇಕಿಲ್ಲ. ವಿಶ್ವವಿದ್ಯಾಲಯಕ್ಕೆ ಬೇಕಾದುದು ಜನತಾ ಬೆಂಬಲ, ಹಾಗೂ ಅಸಂಖ್ಯ ಶಿಕ್ಷಕರ ತಂಡ. ವಿಶ್ವವಿದ್ಯಾಲಯಕ್ಕೆ ಜನರೇ ಹಣಕೊಡಿಸಬೇಕು. ವಿದೇಶೀಯರ ಪ್ರಭುತ್ವದಲ್ಲಿ ಎಲ್ಲವೂ ಮೇಲಿನಿಂದಲೇ ಬರುವ ವಾಡಿಕೆ ಇರುವದು ಸ್ವಾಭಾವಿಕ. ಆಗ ಸರಕಾರವೇ ಹಣ ಹಾಕಿ ವಿಶ್ವವಿದ್ಯಾಲಯ ಸ್ಥಾಪಿಸುತ್ತಿದ್ದಂತೆ ಈಗ ಪ್ರಜಾಪ್ರಭುತ್ವದ ಕಾಲದಲ್ಲಿ ಹಾಗೆ ಅಪೇಕ್ಷಿಸುವದು ಯೋಗ್ಯವಲ್ಲ. ವಿಶ್ವವಿದ್ಯಾಲಯಕ್ಕೆ ಹಾಕಿದ ಹಣವು ಯೋಗ್ಯ ಭೂಮಿಯಲ್ಲಿ ಬಿತ್ತಿದ ಬೀಜದಂತೆ ಒಳ್ಳೆಯಫಲ ಕೊಡಬಲ್ಲದು. ಆದುದರಿಂದ ಜನರು ತಾವೇ ಹಣ ಹಾಕಿ ತಮಗೆ ಬೇಕಾದ ವಿಶ್ವವಿದ್ಯಾಲಯವನ್ನು ಯೋಗ್ಯ ಸಮಯ ಬಂದಾಗ ಸ್ಥಾಪಿಸಿಕೊಳ್ಳಬಹುದು.

ಸ್ವತಂತ್ರ ಹಿಂದುಸ್ಥಾನದಲ್ಲಿ ಮೂಲ ಶಿಕ್ಷಣಕ್ಕೆ ಪ್ರಾಧಾನ್ಯವಿರಬೇಕು. ವಿಶ್ವವಿದ್ಯಾಲಯದಲ್ಲಿ ಅದರ ಸ್ಥಾನಮಾನ ನಿರ್ಧಾರವಾಗಲು ಕೆಲ ವರ್ಷಗಳು ಬೇಕಾಗಬಹುದು. ಈಗಲೆ ವಿಶ್ವವಿದ್ಯಾಲಯ ಸ್ಥಾಪಿಸಿದರೆ ಮೂಲ ಶಿಕ್ಷಣದ ವ್ಯವಸ್ಥೆ ಏನು?

ಮೂಲ ಶಿಕ್ಷಣವು ಕಳೆದ ೮ ವರ್ಷಗಳ ಹಿಂದೆಯೇ ಜನತೆಯ ಮುಂದೆ ಬಂದಿದೆ. ಯಾವ ಶಿಕ್ಷಣ ತಜ್ಞನಿಗೂ ಈ ಶಿಕ್ಷಣ ಪದ್ಧತಿಯನ್ನು ಅಲ್ಲಗಳೆಯುವದು ಜಾಣತನದ್ದಾಗಲಾರದು. ಈ ಶಿಕ್ಷಣವು ಹಳ್ಳಿಗಳ ವಾತಾವರಣದಲ್ಲಿ ಹುಟ್ಟಿ ಬೆಳೆದು ಬಂದಿದೆ. ಹಿಂದುಸ್ಥಾನವೆಂದರೆ ಅಸಂಖ್ಯ ಹಳ್ಳಿಗಳೇ ಹೊರತು ಪಾಶ್ಚಾತ್ಯರ ಆಳಿಕೆಯಲ್ಲಿ ತಲೆಎತ್ತಿದ ನಗರಗಳಲ್ಲ. ಈ ಹಳ್ಳಿಗಳನ್ನು ಮರೆತರೆ ಹಿಂದುಸ್ಥಾನವನ್ನೇ ಮರೆತಂತೆ. ಈ ಮೂಲ ಶಿಕ್ಷಣದ ಮೂಲತತ್ವಗಳು ಇಂತಿವೆ.

೧ ನಿಜವಾದ ಎಲ್ಲ ಶಿಕ್ಷಣವೂ ಸ್ವಾವಲಂಬಿಯಾಗಿರಬೇಕು.

೨ ಶಿಕ್ಷಣವು ಕೈಕೆಲಸದ ಮೂಲಕ ಕೊಡಲಾಗುವದು.

೩ ಈ ಶಿಕ್ಷಣದಲ್ಲಿಯಾವದೊಂದು ಧರ್ಮದಿಲ್ಲವೆ ಪಂಗಡದ ಶಿಕ್ಷಣಕ್ಕೆ ಸ್ಥಾನವಿಲ್ಲ. ಇದರಲ್ಲಿ ಮಾನವತೆಯ ಮೂಲಭೂತ ನೀತಿ ತತ್ವಗಳಿಗೆ ಮಾತ್ರ ಸ್ಥಾನವಿದೆ.

೪ ಈ ಶಿಕ್ಷಣವೆಲ್ಲ ಪ್ರಾಂತಿಕ ಭಾಷೆಯ ಮೂಲಕವೇ ಕೊಡತಕ್ಕದ್ದು.

೫ ಶಿಕ್ಷಣವನ್ನು ಬಾಲ,ವೃದ್ಧ, ಸ್ತ್ರೀ ಪುರುಷ—ಯಾರಿಗೇ ಕೊಟ್ಟರೂ ಅವರ ಮನೆಯಲ್ಲಿ ಈ ಶಿಕ್ಷಣದ ಪ್ರವೇಶ ತಂತಾನೇ ಆಗಬೇಕು.

೬ ಈ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳು ಹಿಂದುಸ್ಥಾನದ ನಾಗರಿಕರಾಗುವದರಿಂದ ಅಂತಃಪ್ರಾಂತೀಯ ವ್ಯವಹಾರಕ್ಕಾಗಿ ರಾಷ್ಟ್ರಭಾಷೆಯಾದ ಹಿಂದುಸ್ಥಾನಿ, ಉರ್ದು ಮತ್ತು ನಾಗರಿ ಲಿಪಿಗಳೂ ಕಲಿಸಲ್ಪಡುವವು.

ಆದುದರಿಂದ ಎಲ್ಲ ಶಿಕ್ಷಣಾಭಿಮಾನಿಗಳಿಗೂ ವಿಶ್ವವಿದ್ಯಾಲಯ ಸ್ಥಾಪನೆಗೆ ನ್ಯಾಯವಾಗಿ ಕೆಲವೊಂದು ಸಮಯ ಕಾಯಬೇಕಾಗುವದೆಂಬ ಮಾತು ಮನದಟ್ಟಾಗಬಹುದೆಂದು ನಾನು ಭಾವಿಸುವೆ.

ಹೊಸದಿಲ್ಲಿ
೨೫—೧೦—೪೭

## ಜನತೆಗೆ ಸ್ವರಾಜ್ಯ
## ಜನತೆಯ ಹಿತ

ಜನತಾಹಿತವೇ ನಮ್ಮ ಕೇಂದ್ರ ಮತ್ತು ಪ್ರಾಂತಗಳ ಆಡಳಿತದ ಚಟುವಟಿಕೆಗಳ ಮಾನದಂಡ. ಆಹಾರ, ಬಟ್ಟೆ, ಆಶ್ರಯ ಸ್ಥಳ—ಈ ಯಾವ ಕಡೆಗೇ ನೋಡಲಿ, ಕಳೆದ ವರ್ಷಕ್ಕಿಂತ ಇಂದಿನ ಸ್ಥಿತಿ ಬಹಳ ಕೆಟ್ಟಿದೆ. ಬಹಳ ಜನರಿಗೆ ಉಪವಾಸ ಮತ್ತು ಸಾವು ಎದುರಾಗಿದೆ.

ಆಹಾರ ಪರಿಸ್ಥಿತಿಯನ್ನು ಸುಧಾರಿಸಲು ಏನು ಮಾಡಲಾಗಿದೆಯೆಂಬುದನ್ನು ತಿಳಿಯಲು ಸಾರ್ವಜನಿಕರಿಗೆ ಹಕ್ಕಿದೆ. ಸೀದಾಪದ್ಧತಿ ಮತ್ತು ನಿಯಂತ್ರಣಗಳು ಬಹಳ ಹಾನಿ ಮಾಡಿವೆ. ಅವುಗಳಿಂದ ಕಳ್ಳಪೇಟೆ ಹುಟ್ಟಿದೆ. ಅದು ದಿನೇ ದಿನೇ ಹೆಚ್ಚುಹೆಚ್ಚು ಕರಾಳವಾಗುತ್ತಿದೆ. ಮುದ್ದಿಗಾಗಿ ಬೆಳೆವ ಬೆಳೆ ದಿನೇ ದಿನೇ ಹೆಚ್ಚುತ್ತ ಹೋಗುತ್ತಿದೆ. ಅಂದಮೇಲೆ ಆಹಾರ ಧಾನ್ಯಗಳಿಗಾಗಿ ಎಷ್ಟು ಹೊಸ ನೆಲವನ್ನು ಬಳಸಲಾಗಿದೆ? ಅಸ್ತವ್ಯಸ್ತವಾಗಿ ಸಂಗ್ರಹಿಸುವುದರಿಂದಲೂ ಗಿರಣಿಗೆ ಕೊಡುವುದರಿಂದಲೂ ಇರುವ ಆಹಾರ ವಸ್ತು ಉಳಿಸಲು ಯಾವ ಯತ್ನವನ್ನು ಕೈಕೊಳ್ಳಲಾಗಿದೆ?

### ಅಂಧಾನುಕೃತಿ ಕೂಡದು

ಬ್ರಿಟನ್ನಿನಂತಹ ನಾಡುಗಳು ಬಳಸಿದ ಪದ್ಧತಿಗಳನ್ನು ಕಣ್ಣುಮುಚ್ಚಿಕೊಂಡು ನಾವು ಅನುಕರಿಸ ಕೂಡದು. ಬ್ರಿಟನ್ನಿನ ಆರ್ಥಿಕ ಸ್ಥಿತಿ ನಮ್ಮದಕ್ಕೆ ತೀರ ವಿರುದ್ಧವಾಗಿದೆ. ಅವು ಪಕ್ವಾಮಾಲುಗಳನ್ನು ನಿರ್ಯಾತಮಾಡಿ ಆಹಾರ ದ್ರವ್ಯಗಳನ್ನು ತರಿಸಿಕೊಳ್ಳುವವು. ದೇಶದೊಳಗೆ ಬರುವ ಆಹಾರವೆಲ್ಲ ಗೊತ್ತಿದೆ ಮತ್ತು ಅದನ್ನು ಜನಸಂಖ್ಯಾನುಸಾರ ಹಂಚಿದಾಗ ತಲೆಗಿಂತಿಷ್ಟೆಂಬುದು ಬರುತ್ತದೆ. ಹೀಗೆ ಬ್ರಿಟನ್ನಿನಲ್ಲಿ ಸೀದಾಪದ್ಧತಿ ಹಾಗೂ ನಿಯಂತ್ರಣಗಳು ಆಹಾರ ಪರಿಸ್ಥಿತಿಯನ್ನು ಸುಧಾರಿಸಬಲ್ಲವು.

ನಮ್ಮದು ಒಕ್ಕಲುತನದ ನಾಡು. ಅದು ನಮಗೆ ಬೇಕಾದ ಆಹಾರದಲ್ಲಿ ಹೆಚ್ಚಿನ ಭಾಗವನ್ನು ಬೆಳೆಯಬಲ್ಲುದು. ಸದ್ಯದ ಆಹಾರ ಸಂಗ್ರಹ ಕೇವಲ ಅಂದಾಜಿನಲ್ಲಿ ನಿಂತಿದೆ. ದೊಡ್ಡ ಪ್ರಮಾಣದಲ್ಲಿ ಬೆಳೆ ತೆಗೆವ ಬಗ್ಗೆ ಪ್ರೋತ್ಸಾಹವಿಲ್ಲದುದರಿಂದ ಸೀದಾದೊಳಗಿರುವ ಸಂಗ್ರಹವು ನಿರಕ್ಷರ ಕುಕ್ಷಿಗಳಾದ ಜನರ ದೆಸೆಯಿಂದಾಗಿ ಹಂಚುವವರಿಗೆ ಬಹಳ ತೊಂದರೆ ಕೊಡುತ್ತಿರುವುದಲ್ಲದೆ ಕಳ್ಳಪೇಟೆಗೆ ಪ್ರೋತ್ಸಾಹ ಕೊಡುತ್ತಿದೆ. ಆದುದರಿಂದ ಸಮಸ್ಯೆಯನ್ನು ನಾವು ವಿರುದ್ಧ ದಿಕ್ಕಿನಿಂದ ಎದುರಿಸಬೇಕು. ನಾಡಿಗಗತ್ಯವಾದ ಹಾಗೆ ಹುಟ್ಟುವಳಿಯನ್ನು ಹೆಚ್ಚಿಸಲು ಅನುಕೂಲವೊದಗಿಸಿಕೊಳ್ಳಬೇಕು. ಇದಕ್ಕೆ ಲೈಸೆನ್ಸ ಕೊಡುವುದು ಮತ್ತು ಉತ್ಪಾದನೆಯನ್ನು ನಿಯಂತ್ರಿಸುವುದು ಅಗತ್ಯ. ಇರುವ ಸಂಗ್ರಹವನ್ನು ಹಂಚಿಬರಿದು ಮಾಡುವುದಲ್ಲ. ಬ್ರಿಟನ್ನಿನ ಪರಿಸ್ಥಿತಿ ಅದನ್ನು ಆಡಳಿತ ಯಂತ್ರದ ಪಕೋಟಿಯಲ್ಲಿಡುವುದಕ್ಕೆ ಹೊಂದುತ್ತದೆ; ನಮ್ಮ ನಾಡಿನ ಪರಿಸ್ಥಿತಿ ಒಕ್ಕಲುತನದ ಶಾಖೆಗೆ ತಜ್ಞರ ಸಹಾಯ ಬೇಕೆನ್ನುತ್ತದೆ.

### ತರಿಸಿಕೊಂಡ ಆಹಾರದಿಂದ ಆಗಬಹುದಾದ ಅಪಾಯ

ಆಗಲೇ ಸೋತ ಹೊರಗಿನ ಹುಟ್ಟುವಳಿದಾರರೆಡೆಗೆ ಭಿಕ್ಷಾಪತ್ರೆಯನ್ನೊಯ್ದು ಅವರಿಗೆ ಮತ್ತಷ್ಟು ತೊಂದರೆ ಕೊಡುತ್ತಿದ್ದೇವೆ. ಅವರು ಮಾರಲು ಆಹಾರ ದ್ರವ್ಯ ಉಳಿದಿರಲು ವಿಪರೀತ ಧಾರಣೆ ಹೇಳುತ್ತಾರೆ. ಕಾಲ ಮತ್ತು ದೂರದ ಕಾರಣಗಳಿಂದ ನಮ್ಮ ನಾಡಿಗೆ ಅವನ್ನು ತರುವಾಗ ಅವುಗಳ ಹೆಚ್ಚಿನ ಪೌಷ್ಟಿಕ ವಸ್ತುಗಳನ್ನು ಶುದ್ಧೀಕರಣದಿಂದ ಕಳೆದುಕೆಗೆದು ಇಲ್ಲಿಗೆ ತರಿಸಿಕೊಳ್ಳಬೇಕಾಗುತ್ತದೆ. ನಮ್ಮ ಆಹಾರ

—೧೦ ನೇ ಪುಟಕ್ಕೆ

# ಗೋ ಹತ್ಯೆ

ಕಟುಕರಿಂದ ಗೋಗಳನ್ನು ಸಂರಕ್ಷಿಸುವ ಬಗ್ಗೆ ಇಂದು ಎಲ್ಲ ಕಡೆಗೂ ಸೊಲ್ಲು ಕೇಳಿ ಬರುತ್ತದೆ. ಸಿಕ್ಕಾಬಟ್ಟೆ ಪಶು ಹತ್ಯೆಮಾಡುವದರಿಂದ ದೇಶಕ್ಕಾಗುವ ದುಷ್ಪರಿಣಾಮ ನಮ್ಮ ಜನಕ್ಕೆ ಮನದಟ್ಟಾದುದು ತುಂಬ ಸಂತೋಷದ ಸಂಗತಿ. ಶಾಖಾಹಾರದ ನಮ್ಮ ದೇಶಕ್ಕೆ ಹಾಲು ಮುಖ್ಯ ಆಹಾರದಲ್ಲೊಂದು ಪದಾರ್ಥ ಎಂಬ ಸಹಜ ಕಾಣುವ ಮಾತೇ ಆಕಳಿಗೆ ಅಗ್ರಸ್ಥಾನ ಕೊಡುತ್ತದೆ. ಆಕಳು ನಾಡನ್ನು ಪುಷ್ಟಿಗೊಳಿಸುವ ತಾಯಿ. ಇದಲ್ಲದೆ ಒಕ್ಕಲಿಗನಿಗೆ ಹೊಲ ಮನೆಯ ಕೆಲಸ [illegible]ಬೇಕಾಗುವ ಎತ್ತು ಹೋರಿಗಳನ್ನು [illegible]ದಯಿಸುತ್ತದೆ. ಇದಕ್ಕಾಗಿಯೇ ಗೋ [illegible]ದರೆ ದೇವತೆ ಎಂಬ ಧಾರ್ಮಿಕ ಭಾವನೆ ನಮ್ಮ ಜನಗಳಲ್ಲಿ ಮನೆಮಾಡಿದೆ ಮತ್ತು ಗೋಹತ್ಯೆ ಪಾತಕವೆಂಬುದಾಗಿ ಪರಿಗಣಿಸಲ್ಪಡುತ್ತದೆ. ಒಂದು ಧರ್ಮದವರ ಈ ಶ್ರದ್ಧೆಯೇ ಇನ್ನೊಂದು ಧರ್ಮದವರ ಧರ್ಮಾಂಧತೆಯನ್ನು ಕೆರಳಿಸಿ ಗೋವನ್ನು ನಿಷ್ಕಾರಣ ಜೀವನ ಮರಣಗಳ ಇರುಕಿನಲ್ಲಿ ಸಿಲುಕಿಸಿದೆ. ಆದ್ದರಿಂದ ಇಂದು ಕೇವಲ ರಾಷ್ಟ್ರೀಯ ದೃಷ್ಟಿಯಿಂದ ಗೋವಿನ ಅಗತ್ಯವನ್ನು ಪರಿಶೀಲಿಸಿ ಅದಕ್ಕೆ ಸಲ್ಲತಕ್ಕ ಸ್ಥಾನ ಮಾನಗಳನ್ನು ನಿರ್ಧರಿಸುವದು ಅಗತ್ಯವಾಗಿದೆ.

ಶಿಲ್ಪಿಗೆ ಅವನು ಉಪಯೋಗಿಸುವ ಸಾಧನ ಸಲಕರಣೆಗಳೆಲ್ಲ ಪೂಜಾವಸ್ತುವಾಗಿ ಕಾಣುವಷ್ಟು ಅವು ಹಿರಿಮೆ ಹೊಂದುವದು ಸಹಜ. ಎಂದೇ ಶಸ್ತ್ರ ಪೂಜೆಗಾಗಿ ಹಿಂದೀಯರು ಒಂದು ದಿನವನ್ನೇ ಗೊತ್ತುಪಡಿಸಿಕೊಂಡಿದ್ದಾರೆ. ತನ್ನ ಆರ್ಥಿಕ ಉತ್ಪತ್ತಿಗೆ ಶಸ್ತ್ರಸಾಧನಗಳನ್ನು ಅವಲಂಬಿಸಬೇಕಾಗುತ್ತದೆಂಬುದು ಮಾನವನಿಗೆ ಮನದಟ್ಟಾಗಿ ಹೋಗಿದೆ. ಎಂದೇ ಅವನು ಅವಕ್ಕೆ ಕೃತಜ್ಞನಾಗಿರುತ್ತಾನೆ. ಶಿಲ್ಪಿಯು ಹೀಗೆ ತನ್ನ ಶಸ್ತ್ರಸಾಧನಗಳನ್ನವಲಂಬಿಸಿದರೆ ಒಕ್ಕಲಿಗನಾದವನು ಉಳಲು ಬಿತ್ತಲು ಆಕಳನ್ನು ಅವಲಂಬಿಸಬೇಕಾಗುತ್ತದೆ. ಅನ್ನೋತ್ಪಾದನದ ಮುಖ್ಯ ಸಾಧನವಾಗಿರುವ ಆಕಳು, ಹಿಂದುಸ್ಥಾನದಂತಹ ಕೃಷಿಪ್ರಧಾನ ದೇಶದಲ್ಲಿ ನಮ್ಮ ಆರ್ಥಿಕ ಏಳಿಗೆಗೆ ಕೇಂದ್ರವಾಗಿರುವದೇ ನಾಶ್ಚರ್ಯ?

ಹೋರಿಗಳನ್ನು ಒದಗಿಸುವ ಮುಖ್ಯ ಸಾಧನವೆಂದು ನಾವು ಆಕಳನ್ನು ಪರಿಗಣಿಸಿದಾಗ ಅದರ ಮಹತ್ವ ಇನ್ನೂ ಹೆಚ್ಚುವದು. ಆಕಳು ನಮ್ಮ ಆರ್ಥಿಕ ಉನ್ನತಿಯ ಜೀವಾಳ. ಆಹಾರ ಬೆಳೆಯಲು, ಸ್ಥಳದಿಂದ ಸ್ಥಳಕ್ಕೆ ಹೋಗಲು ಬರಲು ಮತ್ತು ಅನ್ನ ವಿತರಣ ಮಾಡಲು ಎಲ್ಲಕ್ಕೂ ನಮಗೆ ಆಕಳೇ ಸೌಕರ್ಯ ಒದಗಿಸಿ ಕೊಡುತ್ತಿಲ್ಲವೆ? ಕೆಲ ದಿನಗಳ ಹಿಂದೆ ಇಂಗ್ಲಂಡ ಮತ್ತು ಇನ್ನುಳಿದ ಪಾಶ್ಚಾತ್ಯ ದೇಶಗಳಲ್ಲಿ ತಮ್ಮ ಅರ್ಥಿಕ ಏಳಿಗೆಗೆ ಅಶ್ವಶಕ್ತಿಯನ್ನು ಅವಲಂಬಿಸಿದಂತೆ ನಾವು ಆಕಳನ್ನೂ ತನ್ಮೂಲಕ ಎತ್ತು ಹೋರಿಗಳನ್ನೂ ಅವಲಂಬಿಸಿದ್ದೇವೆ.

ಹೋದ ಶತಕದಲ್ಲಿ ಇಂಗ್ಲಂಡವು ತನ್ನ ಅರ್ಥಿಕ ಪ್ರಯೋಜನಕ್ಕೆ ಅಶ್ವಶಕ್ತಿಯನ್ನು ತೊರೆದು ಕಲ್ಲಿದ್ದಲಿಯನ್ನು ಅವಲಂಬಿಸಿತು. ಆ ಮೇಲೆ ಕಲ್ಲಿದ್ದಲಿಯನ್ನು ತೊರೆದು ಈಗ ಎಂಣೆಯನ್ನು ಅವಲಂಬಿಸತೊಡಗಿದೆ. ಕಾಲಕಾಲಕ್ಕಾದ ಈ ಸಂಚಾಲಕ ಶಕ್ತಿಯ ಮಾರ್ಪಾಟು ಸಮಗ್ರ ಜಗತ್ತಿನ ಆಗುಹೋಗುಗಳನ್ನೇ ನಿರ್ಣಯಿಸುವ ಕಾರಣ ಈ ಸಂಚಾಲಕ ಶಕ್ತಿಯ ಚರಿತ್ರೆಯನ್ನು ಅಲಕ್ಷಿಸಬರುವಂತಿಲ್ಲ.

ಗೋಗಳನ್ನೂ ಅಶ್ವಗಳನ್ನೂ ಅವಲಂಬಿಸಿದ ಅರ್ಥಿಕ ಉತ್ಪಾದ್ಯವು ಅಮಿತವಾಗಿ ಬೆಳೆಯಬಲ್ಲುದಲ್ಲದೇ ಯಾವ ದೇಶದವರ ದುರಾಶೆಯನ್ನೂ ಹೊಟ್ಟೆಯಕಿಚ್ಚನ್ನೂ ಉದ್ರೇಕಿಸಲಾರದು. ಗೋಗಳಿಂದ ಹೋರಿಗಳನ್ನೂ ಅಶ್ವಗಳಿಂದ ಅಶ್ವಗಳನ್ನೂ ಬೇಕಾದಷ್ಟು ಬೆಳೆಯಿಸಿಕೊಳ್ಳಬಹುದು. ಅದಕ್ಕೆ ಯಾರೂ ನಿರ್ಬಂಧ ತಂದೊಡ್ಡಲಾರರು. ಆದರೆ ಅದೇ ಕಲ್ಲಿದ್ದಲು ಎಣ್ಣೆ ಮತ್ತು ಪೆಟ್ರೋಲಿನ ಮಾತು ಹಾಗಲ್ಲ. ಇವು ಮಿತಪದಾರ್ಥಗಳಾದ್ದರಿಂದ ಇವು ಒಂದು ದೇಶದಲ್ಲಿ ಪ್ರಚುರವೆಂದು ತೋರುತ್ತಲೇ ಇನ್ನೊಂದು ದೇಶದವರಿಗೆ ಹೊಟ್ಟೆ ಉರಿಯ ಹತ್ತುತ್ತದೆ. ಆ ಮುಂದಿನ ಹೆಜ್ಜೆ ಅವನ್ನು ವಶಪಡಿಸಿಕೊಳ್ಳುವ ಚಪಲ. ಈ ಚಾಪಲ್ಯದ ಫಲ ಯುದ್ಧ; ಒಬ್ಬರನ್ನೊಬ್ಬರು ಕೊಂದು ಬದುಕಬೇಕೆಂಬ ದುರಿಚ್ಛೆ. ಎಣ್ಣೆಯ ಕಣಿಗಳನ್ನು ವಶಪಡಿಸಿಕೊಳ್ಳಲೆಂದೇ ಜಾಗತಿಕ ಯುದ್ಧ ಸಂಭವಿಸುತ್ತಿರುವವೆಂಬ ಮಾತು ಸರ್ವವಿದಿತ. ಆದ್ದರಿಂದ ಆಕಳು ಮತ್ತು ಅಶ್ವಗಳು ಆರ್ಥಿಕ ಕೇಂದ್ರವಿದ್ದಲ್ಲಿ ಈ ಅನಾಹುತಗಳಾಗುವ ಕಾರಣವಿಲ್ಲ. ಅಂತಹ ದೇಶಗಳು ಶಾಂತಿಯಲ್ಲಿ ಬಾಳಬಲ್ಲವು. ಆದ್ದರಿಂದ ಗೋಪ್ರಧಾನವಲ್ಲದ ಆರ್ಥಿಕ ಸಾಧನಗಳನ್ನು ಅವಲಂಬಿಸುವದೆಂದರೆ ಅದೊಂದು ಪ್ರಕಾರದ ಗೋಹತ್ಯೆಯೆಂದೇ ವ್ಯಾಪಕಾರ್ಥದಲ್ಲಿ ಹೇಳಬಹುದು. ಅಂದರೆ ನಮ್ಮ ಚಟುವಟಿಕೆಗಳು ಗೋಕೇಂದ್ರೀಕೃತ ಅರ್ಥಶಾಸ್ತ್ರಕ್ಕೆ ಬಾಧೆ ತರುವಂತಹವಿದ್ದರೆ ನಾವು ಗೋಸಂರಕ್ಷಕರ ಜೊತೆಗಿದ್ದೇವೆಂದು ಹೇಳಲಾಗುವದಿಲ್ಲ. ಉದಾಹರಣಾರ್ಥ, ನಾವು ಕಲ್ಲಿದ್ದಲನ್ನು ಎಂಣೆ ಅಥವಾ ಪೆಟ್ರೋಲನ್ನು ಮುಖ್ಯ ಸಂಚಾಲಕ ಶಕ್ತಿಯೆಂದು ಉಪಯೋಗಿಸಿದ್ದಾದರೆ ನಾವು ಆಕಳನ್ನು ನಮ್ಮ ಅರ್ಥಿಕ ಲೋಕದಿಂದ ತಳ್ಳಿಬಿಟ್ಟಂತಾಗುವದು. ಇದು ಗೋದ್ರೋಹವಲ್ಲದೆ ಮತ್ತೇನು? ಮಣುಪಾಡೆಗಟ್ಟಿಯಾದ ಮತ್ತು ಸಮುಪಾತಳಿಯ ಬೀದಿಗಳನ್ನು ರಚಿಸುವದಾದರೆ ಇದೂ ಗೋದ್ರೋಹವೇ. ಯಾಕಂದರೆ ಪಶುಗಳ ಕಾಲಿಗೆ ಈ ಬಗೆಯ ದಾರಿ ಒಗ್ಗುವಂತಹದಲ್ಲ. ಇದರಿಂದ ನಾವು ಗೋಕೇಂದ್ರವಾದ ಅರ್ಥಿಕಲೋಕದಿಂದ ಪರಾವೃತ್ತರಾದಂತೆಯೇ. ಎರಡು ಕೋಡಿನ ನಾಲ್ಕು ಕಾಲಿನ ಪಶುವನ್ನು ವಧೆಮಾಡುವ ಮಾತಿಗಿಂತ ಗೋ-ರಕ್ಷಣೆಯ ಈ ಬಗೆಯ ಮಾರ್ಮಿಕ ಪರ್ಯಾಲೋಚನೆ ತೀರ ಮಹತ್ವದ್ದು.

ಗೋ ಸಂರಕ್ಷಣೆಯ ಈ ವಿಶಾಲಾರ್ಥದಲ್ಲಿ ಗೋ ಹತ್ಯೆಗೆ ವಿರುದ್ಧವಿದ್ದ ಎಷ್ಟು ಜನರ ಕೈ ಗೋವಧೆಯ ರಕ್ತದಿಂದ ಕಲುಷಿತವಾಗಿಲ್ಲವೋ ಹೇಳುವದು ದುಸ್ತರ. ಖಾದಿಯ ಹಾಗೆ ಆಕಳು ಕೂಡ ಒಂದು ಬಗೆಯ ವಿಶಿಷ್ಟ ಜೀವನಕ್ರಮದ ಕುರುಹಾಗಿದೆ. ಆದ್ದರಿಂದ ಗೋ ಪ್ರತಿಪಾಲಕರೆಂದು ಹೇಳಿಕೊಳ್ಳುವವರು ತಾವು ಪ್ರಚಾರ ಪಡಿಸಬೇಕೆಂಬ ತತ್ವವನ್ನು ಈ ವಿಶಾಲ ದೃಷ್ಟಿಯಿಂದ ವಿಶಾಲಾರ್ಥದಲ್ಲಿ ಗ್ರಹಿಸುವರೆಂದು ಆಶಿಸುವಾ.

— ಜೆ. ಸಿ. ಕುಮಾರಪ್ಪ

# ಗಾಂಧಿಯವರ ಪ್ರಾರ್ಥನೋತ್ತರ ಭಾಷಣಗಳು

ಬಿರ್ಲಾಭವನ, ನೊಸದಿಲ್ಲಿ,
೨೭—೧೦—೪೭

## ಹೊರಡಲು ಒತ್ತಾಯವೆ?

ಹಿಂದೀ ಒಕ್ಕೂಟದಲ್ಲಿಯ ತಮ್ಮ ವಂಶಪಾರಂಪರ್ಯದ ಮನೆಮಾರುಗಳನ್ನು ಬಿಟ್ಟು ಪಾಕಿಸ್ತಾನಕ್ಕೆ ಹೊರಡಲು ಮುಸ್ಲಿಮರನ್ನು ಒತ್ತಾಯಪಡಿಸಲಾಗುತ್ತಿದೆಯೆಂಬ ದೂರುಬಂದಿದೆ. ಹೀಗೆ ನಾನಾ ರೀತಿಯಿಂದ ಅವರು ತಮ್ಮ ಮನೆಗಳನ್ನು ಬಿಟ್ಟು ರೈಲು ಇಲ್ಲವೆ ಕಾಲುನಡಿಗೆಯಿಂದ ತೆರಳುವವರೆಗೆ ಶಿಬಿರಗಳಲ್ಲಿ ಕಾದಿರುವಂತೆ ಮಾಡಲಾಗುತ್ತಿದೆಯೆಂದು ಹೇಳಲಾಗಿದೆ. ಒಕ್ಕೂಟ ಮಂತ್ರಿಮಂಡಲದ ಧೋರಣವು ಅಂಥದಲ್ಲವೆಂದು ನನಗೆ ಖಂಡಿತ ಗೊತ್ತಿದೆ. ಈ ದೂರುಗಳನ್ನು ಅವರಿಗೆ ನಾನು ಹೇಳಿದರೆ ಅವರು ನಗುವರು ಮತ್ತು ಸುದ್ದಿ ಸುಳ್ಳಿರಬೇಕು ಇಲ್ಲವೆ ಅಧಿಕಾರಿಗಳು ಸರಕಾರದ ಧೋರಣದಂತೆ ನಡೆಯುತ್ತಿಲ್ಲವಾಗಿರಬಹುದು ಎಂದು ಉತ್ತರ ಕೊಡುತ್ತಾರೆ. ನನಗೆ ಸಿಕ್ಕಿದ ಸುದ್ದಿ ನಿಜವಿದೆಯೆಂದು ನನಗೆ ಗೊತ್ತಿದೆ. ಅಧಿಕಾರಿಗಳು ಅವಿಧೇಯರೆ? ಅಗಿರಲಾರರೆಂದು ಭರವಸೆ. ಅದರೂ ಈ ದೂರು ಮಾತ್ರ ಎಲ್ಲೆಡೆಯಿಂದಲೂ ಬಂದಿದೆ. ಅರೋಪಿಸಲಾದ ಅಧಿಕಾರಿಗಳ ಅವಿಧೇಯತೆಗೆ ವಿವಿಧ ಕಾರಣಗಳನ್ನು ಕೊಡಲಾಗಿದೆ. ಮಿಲಿಟರಿ ಮತ್ತು ಪೋಲೀಸರನ್ನು ಜಾತಿವಾರು ವಿಭಜನೆಮಾಡಲಾದದ್ದೇ ಕಾರಣವೆಂಬುದು ಮುಖ್ಯವಾದದ್ದು. ಅದ್ದರಿಂದ ಆ ನೌಕರರು ಇದ್ದ ದಜಾತೀಯಭಾವನೆಗಳಿಗೆ ವಶರಾಗಿದ್ದಾರಂತೆ. ಈ ಅಧಿಕಾರಿಗಳು ಕಾಯದೆ ಸುವ್ಯವಸ್ಥೆಗಳನ್ನು ನೋಡಿಕೊಳ್ಳತಕ್ಕವರು. ಹಾಗಿರುವಾಗ ಇವರಿಗೆ ಜಾತೀಯ ರಂಗು ತಗಲಿದರೆ ಸುವ್ಯವಸ್ಥಿತ ಸರಕಾರವಳಿದು ಅವ್ಯವಸ್ಥೆ ತಲೆದೋರೀತು; ಮತ್ತು ಅವ್ಯವಸ್ಥೆ ಹಾಗೆಯೇ ನಿಂತರೆ ಇಡೀ ಸಮಾಜವೇ ಹಂಚೊಡೆದು ಪಂಚಂಗಾಡೆ ಹಿಡೀತು. ಈ ಅಧಿಕಾರಿಗಳಲ್ಲಿ ಮೇಲಿನ ತರಗತಿಯವರು ಜಾತೀಯ ಭಾವನೆಯನ್ನು ಮೀರಿ ನಿಂತು ಕೈಕೆಳಗಿನವರಿಗೂ ಅ ಜಾತ್ಯತೀತ ಭಾವನೆಯನ್ನು ಕಲಿಸುವುದು ಕರ್ತವ್ಯವಾಗಿದೆ.

## ನೈತಿಕ ಮತ್ತು ಭೌತಿಕ ಬಲಗಳ ತಾರತಮ್ಯ

ನಾಡಿನಲ್ಲಿ ನೆಲೆಗೊಂಡ ಜನಪ್ರಿಯ ಸರಕಾರಗಳಿಗೆ ಹಿಂದೀ ನೌಕರರನ್ನು ಭಯಭಕ್ತಿಯಲ್ಲಿರಿಸುವ ಕಸುವಿನಿಂದ ಪರಕೀಯ ನೌಕರಶಾಹಿಯು ಪಡೆದ ಪ್ರತಿಷ್ಠೆ ಇಂದು ಇಲ್ಲ ಎಂದು ಒತ್ತಿ ಹೇಳಲಾಗಿದೆ. ಇದು ಅರ್ಧಂಬರ್ಧ ನಿಜ. ಏಕೆಂದರೆ, ತನ್ನ ನೆರವಿಗೆ ಪರಕೀಯ ಸರಕಾರ ತೆಗೆದುಕೊಳ್ಳುವ ಭೌತಿಕಬಲಕ್ಕಿಂತ ಜನಪ್ರಿಯ ಸರಕಾರವು ಹೊಂದಿರುವ ನೈತಿಕ ವರ್ಚಸ್ಸೇ ಹೆಚ್ಚಿನದಾಗಿದೆ. ಈ ನೈತಿಕಬಲಕ್ಕೆ ದೇಶೀಯ ಸರಕಾರಕ್ಕಿರುವ ಜನ ಬೆಂಬಲ ಕೊಡುವ ರಾಜಕೀಯ ನೀತಿಯು ಹಿನ್ನೆಲೆಯಾಗಿದೆ. ಅದಿಂದು ಇಲ್ಲದಿರಬಹುದು. ಅದನ್ನು ನಿಲ್ಲಿಸಲುಸಾಧನವಿಲ್ಲ; ಕೇಂದ್ರದಲ್ಲಿಯ ಮಂತ್ರಿಮಂಡಲ ರಾಜೀನಾಮೆ ಕೊಡಬೇಕಾಗಬಹುದು, ನಾವೀ ಸಂಜೆ ವಿಶೇಷವಾಗಿ ಪರಿಶೀಲಿಸುವುದೇದರೆ, ಕೇಂದ್ರದಲ್ಲಿಯ ಅಧಿಕಾರಿಗಳ ಸ್ಥಿತಿಯನ್ನು. ಅದು ಎಂದೂ ದುರ್ಬಲವಾಗಬಾರದಷ್ಟೇ ಅಲ್ಲ, ಅದಕ್ಕಿಂತ ಹೆಚ್ಚಾಗಿ, ಅದಕ್ಕೆಂದೂ ತಾನು ದುರ್ಬಲವೆಂಬ ಭಾವನೆ ಮೂಡಬಾರದು. ಅದಕ್ಕ ತನ್ನ ಕಸುವಿನ ಅರಿವಿರಬೇಕು. ಅದುದರಿಂದ ನೌಕರರಲ್ಲಿ ಸ್ವಲ್ಪವಾದರೂ ಅವಿಧೇಯತೆಯಿರುವುದು ನಿಜವೇ ಆದರೆ ತಪ್ಪಿತಸ್ಥರನ್ನು ಹೊರಗಟ್ಟಬೇಕು, ಇಲ್ಲವೆ ಸಂಬಂಧ ಪಟ್ಟ ಮಂತ್ರಿ ರಾಜೀನಾಮೆ ಕೊಡಬೇಕು ಮತ್ತು ಅಧಿಕಾರಿಗಳ ಮನಸೋ ಇಚ್ಛೆಯ ನಡೆಯನ್ನು ತಹಬಂದಿಗೆ ತರಬಲ್ಲ ಮತ್ತೊಬ್ಬನಿಗೆ ಜಾಗಬಿಟ್ಟುಕೊಡಬೇಕು. ಪದೇ ಪದೇ ನನಗೆ ಬರುತ್ತಿರುವ ದೂರುಗಳನ್ನು ನಾನು ಪ್ರಕಟಿಸುತ್ತಿರುವಾಗಲೆ, ಅವುಗಳಿಗೆ ಬುಡವಿಲ್ಲವೆಂಬ ಮತ್ತು ಒಂದು ವೇಳೆ ಬುಡವಿದ್ದರೆ ನ್ಯಾಯ್ಯವಿಸ್ಥಸ್ಥನ್ನು ಮೇಲಧಿಕಾರಿಗಳು ತೃಪ್ತಿಕರವಾಗಿ ಬಗೆಹರಿಸುವರೆಂಬ ನಂಬಿಗೆಗಿಂಬುಗೊಡಬೇಕಾಗಿದೆ.

## ನಾಗರಿಕರ ಕರ್ತವ್ಯ

ಒಕ್ಕೂಟದಲ್ಲಿಯ ಒತ್ತಾಯಕ್ಕೊಳಗಾದ ನಾಗರಿಕನ ಕರ್ತವ್ಯವೇನು? ನಾಗರಿಕನೊಬ್ಬನು ತನ್ನ ಊರನ್ನು ಬಿಡಬೇಕೆಂದು ಒತ್ತಾಯಿಸುವ ಕಾಯದೆ ಎಲ್ಲೂ ಇಲ್ಲವೆಂಬುದು ಸ್ಪಷ್ಟವಿದೆ. ಅಲ್ಲಲ್ಲಿ ಕೊಡಲಾಗಿದೆಯೆಂಬ ಹುಕುಂಗಳನ್ನು ಕೊಡಬೇಕಾದರೆ ಅಧಿಕಾರಿಗಳು ವಿಶೇಷಾಧಿಕಾರವನ್ನು ಪಡೆಯಬೇಕಾಗುತ್ತದೆ. ನನಗೆ ಈ ವರೆಗೆ ತಿಳಿದಿರುವಂತೆ ಎಲ್ಲೂ ಬರಹ ಮೂಲಕ ಅಪ್ಪಣೆ ಯಾರಿಗೂ ಕೊಡಲ್ಪಟ್ಟಿಲ್ಲ. ಅರೋಪಿಸಿದ ಪ್ರಕಾರ ಹಾಗೆ ಬಾಯಪ್ಪಣೆ ಕೊಟ್ಟವರು ಸಾವಿರಾರು ಮುಂದಿಯಾಗುತ್ತಾರೆ. ಸಮವಸ್ತ್ರಧಾರಿಗಳಿಗೆಲ್ಲ ಹೆದರಿ ವಶವಾಗುವ ಜನರನ್ನು ಏನು ಮಾಡಲೂ ಸಾಧ್ಯವಿಲ್ಲ. ಅಂತಹ ಎಲ್ಲರಿಗೂ ನನ್ನ ನಿರ್ದಿಷ್ಟ ಬುದ್ಧಿವಾದವಿಷ್ಟೆ: ಬರಹ ಮೂಲಕ ಅಪ್ಪಣೆಗಳನ್ನು ಕೇಳಬೇಕು ಅದು ಸಟಿಯೋ ದಿಟವೋ ಎಂಬುದು ನ್ಯಾಯಾಸ್ಥಾನದಲ್ಲಿ ಪರೀಕ್ಷಿಸಲ್ಪಡಬೇಕು! ಯಾವಾಗ? ಅತ್ಯುಚ್ಚ ಅಧಿಕಾರಿಗೆ ಅರಿಕೆ ಮಾಡಿಕೊಳ್ಳುವುದರಿಂದಲೂ ಸಮಾಧಾನ ದೊರೆಯದಾಗ.

ಇದರಲ್ಲಿ ಬಹುಸಂಖ್ಯಾಕರೆಂಬ (ಕೆಟ್ಟ ಮಾತಿನ ಹೆಸರಿಸಲ್ಪಡುವ) ಸಾರ್ವಜನಿಕರು ಮನಸ್ವಿಯಾಗಿ ಆಚರಿಸುವುದನ್ನು ಬಿಡಬೇಕು. ಅವರು ಹಾಗೆ ಬಿಡದಿದ್ದರೆ, ಅವರು ತಾವು ಕುಳಿತಿದ್ದ ಮರದ ಕೊಂಬೆಯನ್ನು ತಾವೇ ಕಡಿದೊಗೆದಂತಾದೀತು! ಅಂತಹ ಅಧಃ ಪಾತದಿಂದ ಮೇಲೇಳುವುದು ಕಠಿನ. ಇನ್ನೂ ಕಾಲವಿದೆ: ಅವರಿಗೆ ಸದ್ಬುದ್ಧಿ ಹುಟ್ಟಲಿ. ಕೆಟ್ಟ ಕೃತ್ಯಗಳ ಸುದ್ದಿ ನಿಜವಾಗಿದ್ದರೂ ಅವರು ಅದರಿಂದ ಉದ್ವಿಗ್ನರಾಗ ಕೂಡದು. ನ್ಯಾಯ ಸ್ಥಾಪನೆಗೆ ಅವಶ್ಯವಿರುವದನ್ನು ಮಾಡುವರೆಂದು ಹೊಣೆಗಾರ ಮಂತ್ರಿಗಳನ್ನು ನಂಬಬೇಕು.

ಬಿರ್ಲಾ ಭವನ, ಹೊಸದಿಲ್ಲಿ,
೨೮—೧೦—೪೭

## ಪ್ರಾಮಾಣಿಕ ವ್ಯವಹಾರ

ಸಭಿಕರಲ್ಲೊಬ್ಬರ ಕಾಗದದತ್ತ ಗಾಂಧಿಯವರ ಗಮನ ತಿರುಗಿತು. ಓಲೆ ಬರೆದವನು ತಾನು ಒಬ್ಬ ಮುಸಲ್ಮಾನ ಡೇರೆ ವ್ಯಾಪಾರಿಯಿಂದ ಕೆಲವು ಪರದೆಗಳನ್ನೂ ಡೇರೆಗಳನ್ನೂ ಬಾಡಿಗೆಗೆ ತೆಗೆದುಕೊಂಡುದಾಗಿಯೂ ಆ ವ್ಯಾಪಾರಿಯೀಗ ಪಾಕಿಸ್ತಾನಕ್ಕೆ ತೆರಳಿರುವುದರಿಂದ ಅದನ್ನು ಯಾರಿಗೆ ಕೊಡಬೇಕೆಂಬುದು ತನಗೆ ತಿಳಿಯುವುದಿಲ್ಲವೆಂದೂ ಕಾಗದದಲ್ಲಿ ಕಾಣಿಸಿದ್ದನು. ಆ ವಿಷಯದ ಬಗ್ಗೆ ಸರದಾರರು ಇಲ್ಲವೆ ಶ್ರೀ ನಿಯೋಗಿಯವರನ್ನು ಕೇಳಬೇಕೆಂದು ಗಾಂಧಿಯವರು ಉತ್ತರವಿತ್ತರು.

## ಅಲಿಘಡದ ಓದಾಳುಗಳು

ಅನಂತರ ಅಲಿಘಡ ಕಾಲೇಜಿನಿಂದ ಬಂದ ಒಬ್ಬ ವಿದ್ಯಾರ್ಥಿಯು ಪಾಕಿಸ್ತಾನದ ವಿದ್ಯಾರ್ಥಿಗಳು ಕಾಲೇಜಿಗೆ ಹಿಂದಿರುಗಿಲ್ಲವೆಂದು ಹೇಳಿದ ಮಾತನ್ನು ಗಾಂಧಿಯವರು ಸಭಿಕರ ಲಕ್ಷ್ಯಕ್ಕೆ ತಂದರು. ಆದರೆ ಕಾಲೇಜಿನಲ್ಲಿರುವವರು ತಮ್ಮ ಕೈಯಲ್ಲಾದ ಮಟ್ಟಿಗೆ ಸದ್ದಿಲ್ಲದೆ ಜಾತೀಯ ಸೌಹಾರ್ದವನ್ನು ಹೆಚ್ಚಿಸಲು ಬಯಸುವುದಾಗಿ ನಿಶ್ಚಯಿಸಿದ್ದಾರೆಂದೂ ಅವರಲ್ಲಿ ಕೆಲವರು ಹಿಂದು ಮತ್ತು ಶೀಖ ನಿರಾಶ್ರಿತ ಶಿಬಿರಗಳಲ್ಲಿ ಹೊದಿಕೆ ಮುಂತಾದುವನ್ನು ಹಂಚಲು ಹೊರಡುವುದುತ್ತಮವೆಂದೂ ಆ ವಿದ್ಯಾರ್ಥಿ ಗಾಂಧಿಯವರಿಗೆ ತಿಳಿಸಿದನು. ತಮ್ಮ ಹಿಂದು ಮತ್ತು ಶೀಖ ಬಂಧುಗಳ ಸೇವೆ ಮಾಡಬೇಕೆಂಬ ಅವರ ಬಯಕೆ ಮೆಚ್ಚಿಗೆಯದಾದರೂ ಅಂತಹ ಸಹಾಯವಿಂದು ಅನಗತ್ಯವೆಂದು ಗಾಂಧಿಯವರೆಂದರು. ಅದು ನಿರರ್ಥಕವಾಗಿ ಪರಿಣಮಿಸೀತು. ಅದಕ್ಕಿಂತ ಹೆಚ್ಚಾಗಿ ಆ ವಿದ್ಯಾರ್ಥಿಗಳು ಪಾಕಿಸ್ತಾನಕ್ಕೆ ಹೋಗಿ ಹಿಂದು ಮತ್ತು ಶೀಖರೇಕೆ ಮನೆ ಬಿಟ್ಟು ಹೊರಟರೆಂದು ಅಲ್ಲಿಯ ಮುಸಲ್ಮಾನರನ್ನು ಕೇಳಬೇಕು. ಅವರು ನಿರಾಶ್ರಿತರಲ್ಲಿಗೆ ಹೋಗಿ ಮನೆಗೆ ಮರಳುವಂತೆ ಹೇಳಲು ಸಂಬಂಧಪಟ್ಟ ಅಧಿಕಾರಿಗಳ ಮನಸ್ಸನ್ನು ತಿರುಗಿಸಬೇಕು. ಮುಸ್ಲಿಂ ನಿರಾಶ್ರಿತರ ಬಗ್ಗೆ ಹಿಂದು ಶೀಖರೂ ಹಾಗೇಮಾಡಬೇಕು. ನ್ಯಾಯವಾದ ಕಾರಣವಿಲ್ಲದೆ ಯಾವನೂ ತನ್ನ ಮನೆ ಬಿಡನು. ಕಾರಣವಿಲ್ಲೆಂಬುದು ಒಂದು ಸಾಮಾನ್ಯ ನಿಯಮ. ಗಾಂಧಿಯವರ ಪ್ರಕಾರ ಈ ನಿರಾಶ್ರಿತರು ಸ್ವಸ್ಥಾನ ಸೇರಿದ ಹೊರತು ಇಬ್ಬರ ನಡುವೆ ಶಾಂತಿ ಸಾಧ್ಯವಾಗದು.

## ತಿಕೀಟಿಲ್ಲದೆ ತಿರುಗುವ ಕೆಟ್ಟನಡತೆ

ಇಂದು ತಿಕೀಟಿಲ್ಲದೆ ತಿರುಗುವುದರತ್ತ ಗಾಂಧಿಯವರು ಸಭಿಕರ ಲಕ್ಷ್ಯಸೆಳೆದರು. ಇದು ಒಂದು ಸಾಮಾನ್ಯ ಕಾಹಿಲೆಯೆನಿಸಿದೆ ಜನರು ಸ್ವಾತಂತ್ರ್ಯಕಾಲದಲ್ಲಿ ಎಲ್ಲರೂ ತಿಕೀಟಿಲ್ಲದೆ ತಿರುಗಬಹುದೆಂದು ತಿಳಿದಂತಿದೆ. ಅದರಿಂದ ಸರಕಾರಕ್ಕೆ ಆ ಕೋಟಿ ರೂಪಾಯಿಗಳ ನಷ್ಟ ಸಂಭವಿಸಿದೆ. ಆ ನಷ್ಟವನ್ನು ಯಾರು ಹೊರಬೇಕು? ಇದರ ಮೇಲೆ ಲಕ್ಷಗಟ್ಟಲೆ ನಿರಾಶ್ರಿತರಿಗೆ ಅನ್ನ ವಸ್ತ್ರ ಒದಗಿಸುವ ಸಮಸ್ಯೆಯಿದೆ. ಭಾರತವು ಈ ಭಾರವನ್ನು ಹೊರುವಷ್ಟು ಐಶ್ವರ್ಯವಂತವಾಗಿಲ್ಲ. ಹೀಗೆ ಸಾಗಿದರೆ ನಾಡು ಹಾಳಾಗಿ ಹೋದೀತು. ರೈಲಿನಿಂದ ಕೋಟಿಗಟ್ಟಲೆ ಲಾಭವಿದೆಯೆಂಬುದು ನಿಜವಾದರೂ ಅದನ್ನು ನಡೆಸಲು ಅಷ್ಟೇ ಖರ್ಚಿದೆಯೆಂಬದು ಅಷ್ಟೇ ನಿಜ. ಅದುದರಿಂದ ಹೀಗೇ ಈ ತಿಕೀಟಿಲ್ಲದ ಪಯಣ ಹೆಚ್ಚುತ್ತ ಹೋದರೆ ಹಿಂದುಸ್ತಾನವು ಸುಡುಗಾಡು ಕಾಣಬೇಕಾದೀತು. ಪಾಕಿಸ್ತಾನದಲ್ಲೂ ಹೀಗೆ ಇದೊಂದು ಕಸಬಾಗಿದೆಯೆಂದು ಗಾಂಧಿಯವರು ತಾವು ಕೇಳಿರುವುದಾಗಿ ಹೇಳಿದರು. ಅನಂತರ, ರೈಲಿನ ಡಬ್ಬಿಗಳಲ್ಲಿ ಅರೋಗ್ಯದ ನಿಯಮಗಳನ್ನು ಪಾಲಿಸುವುದರ ಅವಶ್ಯಕತೆಯನ್ನು ಗಾಂಧಿಯವರು ಮನದಟ್ಟು ಮಾಡಿಕೊಟ್ಟರು. ಡಬ್ಬಿಯಲ್ಲಿ ಉಗುಳುವುದು ಮೊದಲ ದುರಭ್ಯಾಸ. ಶಾಕಷ್ಟು ಕಾರಣವಿಲ್ಲದೆ ಅಲಾರಂ ತಂತಿಯನ್ನು ಎಳೆಯುವುದು ಮುಂತಾದ ರೈಲಿನ ನಿಯಮಗಳನ್ನು ಮೀರುವುದನ್ನೂ ಅವರು ಹೀಗಳೆದರು.

ಗಾಂಧಿಯವರು ಅನಂತರ, ತಾವು ರೇಲ್ವೆ ಇಲಾಖೆಯ ಆಡಳಿತದ ಮುಖ್ಯಾಧಿಕಾರಿಗಳಾಗಿದ್ದರೆ ತಿಕೀಟು ತೆಗೆದುಕೊಳ್ಳುವ ವರೆಗೆ ರೈಲು ಬಿಡುವುದಿಲ್ಲವೆಂದೂ ಪ್ರವಾಸಿಕರು ತಾವಾಗಿ ಪ್ರಯಾಣದ ತೆರವನ್ನು ಕೊಡುವತನಕ ರೈಲನ್ನು ಹೊರಡಿಸಲಾರೆವೆಂದ ೂ ಜನರಿಗೆ ಹೇಳಿರೆಂದು ರೈಲ್ವೆ ವ್ಯವಸ್ಥಾಪಕರಿಗೆ ಹೇಳುತ್ತಿದ್ದೆವೆಂದರು.

ಬಿರ್ಲಾ ಭವನ, ಹೊಸದಿಲ್ಲಿ,
೨೯—೧೦—೪೭

## ದೀಲಿಪಕುಮಾರರಾಯರು

ಪ್ರಾರ್ಥನಾನಂತರ ಗಾಂಧಿಯವರು ಶ್ರೀ ದಿಲೀಪಕುಮಾರರಾಯರನ್ನು ಸಭಿಕರಿಗೆ ಪರಿಚಯ ಮಾಡಿಕೊಟ್ಟರು. ಆ ಸಂಜೆ ಅವರೇ ಭಜನೆ ಹಾಡಿದ್ದರು. ತಾವು ಕೈದಿಗಳಾಗಿ ಪುಣೆಯ ಸಸೂನ ಅಸ್ಪತ್ರೆಯಲ್ಲಿ ಶಸ್ತ್ರ ಚಿಕಿತ್ಸೆ ಮಾಡಿಸಿ ಕೊಳ್ಳುತ್ತಿದ್ದಾಗ ಅವರ ದನಿಯನ್ನು ಕೇಳಿದ್ದಾಗಿಯೂ ಅದರೆ ಅವರ ಅಂದಿನ ದನಿ ಸಂಗೀತ ಬರದ ತಮಗೆ ಅತ್ಯಂತ ಇಂಪಾಗಿತ್ತೆಂದೂ ಮಹಾತ್ಮರು ಅಭಿಪ್ರಾಯ ಪಟ್ಟರು. ಬಹುಶಃ ಜಗತ್ತಿನಲ್ಲಿ ಅತಿ ಸ್ವಲ್ಪ ಜನರಿಗೆ ಶ್ರೀ ರಾಯರಗಿರುವಂತಹ ಸ್ವಾಭಾವಿಕ ಮಧುರ ಧ್ವನಿಯಿರಬಹುದು. ಅವರು ಪಾಂಡಿಚೆರಿಯ ಅರವಿಂದಾಶ್ರಮಕ್ಕೆ ಸೇರಿದವರು. ಅಶ್ರಮದಲ್ಲಿ ಜಾತಿಕುಲಗಳ ಭೇದವಿಲ್ಲ. ಗತಿಸಿದ ಸರ್ ಅಕ್ಬರ ಹೈದರಿಯವರು ಯಾತ್ರೆಗೆ ಹೋದಂತೆ ಅಶ್ರಮಕ್ಕೆ ಹೋದದ್ದು ಗಾಂಧಿಯವರು ತಮಗೆ ನೆನಪಾಯಿತೆಂದರು. ಸ್ವಾಭಾವಿಕವಾಗಿ ಶ್ರೀರಾಯರು ಹಳೆಯ ಗೆಳೆಯರ ಬಳಗಕ್ಕೆ ಸೇರಿದವರು; ಅವರು ಪೂರ್ವಸಿದ್ಧ ಅಭಿಪ್ರಾಯಗಳನ್ನು ಇಟ್ಟುಕೊಳ್ಳುವವರಲ್ಲ. ಬೇಗ್ಗೆ ಹೋದಾಗ ರಾಯರು ಎರಡು ಹಾಡುಗಳನ್ನು ಹಾಡಿದರು. ಅವು "ವಂದೇ ಮಾತರಂ" ಮತ್ತು ಇಕ್ಬಲರ "ಸಾರೆ ಜಹಾಮೇ ಅಚ್ಛಾ" ಎಂಬ ಗೀತಗಳು. ಸಂಜೆಯ ಭಜನೆಯ ಕಡೆಯ ಸಾಲಿನಲ್ಲಿ ಕುಬೇರರ ಐಶ್ವರ್ಯವು ಅರಮನೆಯಲ್ಲಿದ್ದರೆ ಭಕ್ತನ ಐಶ್ವರ್ಯವು ಮುರಾರಿಯೆಂಬ ರೂಪದಲ್ಲಿರುವ ದೇವರಲ್ಲಿದೆಯೆಂದಿತ್ತು. ಸಭಿಕರು ಆ ಪಾಠವನ್ನು ಕಲಿತರೆ ಅವರು ತಮ್ಮಲ್ಲಿದ್ದ ಎಲ್ಲ ರಾಗ ದ್ವೇಷಗಳನ್ನೂ ಬಿಡಬಲ್ಲರು.

## ಕಾಶ್ಮೀರದ ವೇದನೆ

ಕಾಶ್ಮೀರದ ಪರಿಸ್ಥಿತಿಯನ್ನೆತ್ತಿ ಕಷ್ಟದಲ್ಲಿ ಸಿಕ್ಕಿದ್ದ ಮಹಾರಾಜರು ಒಕ್ಕೂಟಕ್ಕೆ ಸೇರುವೆವೆಂದುದನ್ನು ಗವರ್ನರ ಜನರಲ್ಲರು ಅಲ್ಲಗಳೆಯದಾದರು ಎಂದು ಗಾಂಧಿಯೆಂದರು.

ಅವರು ತಮ್ಮ ಸೈನ್ಯವನ್ನು ಕಾಶ್ಮೀರಕ್ಕೆ ಕಳುಹಿದ್ದಲ್ಲದೆ ಸೇರಿಕೆಯು ತಾತ್ಕಾಲಿಕವೆಂದೂ ಧರ್ಮ ಭೇದವೆಣಿಸದೆ ಮಾಡಲಾಗುವ ಮತಗಣನೆಯ ಮೇರೆಗೆ ಕೊನೆಯ ತೀರ್ಪನ್ನು ಪ್ರಜೆಗಳೇ ಕೊಡುವಂತೆ ಶಾಂತಿಸುವ್ಯವಸ್ಥೆ ನೆಲಸಿದನಂತರ ವ್ಯವಸ್ಥೆಮಾಡಬೇಕೆಂದೂ ಅವರು ಮಹಾರಾಜರಿಗೆ ಹೇಳಿದರು. ಒಳ್ಳೆಯ ಬುದ್ಧಿವಂತಿಕೆಯಿಂದ ಮಹಾರಾಜರು ಶೇಖ ಅಬ್ದುಲ್ಲಾರನ್ನು ತಮ್ಮ ಮಂತ್ರಿಯನ್ನಾಗಿ ನಿಯಮಿಸಿಕೊಂಡರು. ಶೇಖಸಾಹೇಬರು ಸಂದರ್ಭೋಚಿತವಾಗಿ ನಿಮಂತ್ರಣಕ್ಕೆ ಹೃತ್ಪೂರ್ವಕ ಒಪ್ಪಿಗೆಯಿತ್ತು ಮಂತ್ರಿ ಪಟ್ಟದಲ್ಲಿ ಕುಳಿತರು. ಇದನ್ನು ಪತ್ರಿಕೆಗಳಲ್ಲಿ ನೋಡಿ ಸಂತಸವಾಯಿತೆಂದು ಗಾಂಧಿಯವರೆಂದರು. ಪರಿಸ್ಥಿತಿಯೆಂಥದಿತ್ತು? ಅಫ್ರಿದಿ ಮುಂತಾದವರ ದಂಗೆಪಡೆಯು ಶ್ರೀನಗರದತ್ತ ಬರುತ್ತ ಅಕ್ಕ ಪಕ್ಕದ ಹಳ್ಳಿಗಳನ್ನು ಲೂಟಿ ಮಾಡುತ್ತ ನಡೆದು ವಿದ್ಯುದಾಲಯವನ್ನೇ ಧ್ವಂಸಮಾಡಿ ಇಡೀ ಕಾಶ್ಮೀರವನ್ನೇ ಕತ್ತಲಲ್ಲಿ ನೂಕಿ ನಡೆದಿತು. ಪಾಕಿಸ್ತಾನ ಸರಕಾರದ ಪ್ರೋತ್ಸಾಹವಿಲ್ಲದೆ ಇಂತಹ ದೊಡ್ಡ ಪಡೆಯು ಕಾಶ್ಮೀರದೊಳಹೊಗಲು ಧೈರ್ಯಮಾಡುತ್ತಿತ್ತೆನ್ನಲು ಬರದು. ನ್ಯಾಜ್ಯದ ಯುಕ್ತಾಯುಕ್ತತೆಯನ್ನು ವಿವರಿಸಲು ಅಗತ್ಯವಾದ ಸಲಕರಣೆಗಳಿಲ್ಲ. ಅದು ಅವರ ಉದ್ದೇಶ ಸಾಧನೆಗೆ ಕೂಡ ಅವಶ್ಯಕವಿದ್ದಿಲ್ಲ. ತಮ್ಮ ಪ್ರಕಾರ ಎಷ್ಟೇ ಕಡಿಮೆಯಾಗಿರಲಿ, ಕಾಶ್ಮೀರಕ್ಕೆ ದಂಡುಗಳನ್ನು ಕಳುಹಿದ್ದು ಸರಿಯೆಂದು ಗಾಂಧಿಯವರು ಹೇಳಿದರು. ಕಾಶ್ಮೀರಿಗಳಿಗೆ ಅತ್ಮವಿಶ್ವಾಸ ಹುಟ್ಟಿಸಲು ಪರಿಸ್ಥಿತಿಯನ್ನು ಹಿಡಿತದಲ್ಲಿ ಅವು ತರಬೇಕು.—ಕಾಶ್ಮೀರಿಗಳಲ್ಲೂ ಹೆಚ್ಚಾಗಿ "ಕಾಶ್ಮೀರದ ಸಿಂಹ" ನೆಂದು ವಾತ್ಸಲ್ಯದಿಂದ ಜನ ಕರೆವ ಶೇಖ ಸಾಹೇಬರ ಸಲುವಾಗಿ. ಫಲಿತಾಂಶವು ದೇವರ ಕೈಯಲ್ಲಿದೆ. ಮಾನವರು ಮಾಡಬಲ್ಲರು ಇಲ್ಲವೆ ಮಡಿಯಬಲ್ಲರು. ಒಕ್ಕೂಟದ ಸೈನ್ಯದ ಚಿಕ್ಕ ತುಂಡು ಕಾಶ್ಮೀರವನ್ನು ಧೈರ್ಯದಿಂದ ರಕ್ಷಿಸುವಲ್ಲಿ ಸ್ಪಾರ್ಟನರಂತೆ ಅಳಿಸಿಹೋದರೂ ಸರಿ, ಇಲ್ಲವೆ ಶೇಖ ಸಾಹೇಬರ ಹಿಂದು ಶೀಖ ಮುಸಲ್ಮಾನ ಗೆಳೆಯರು, ಸ್ತ್ರೀ ಪುರುಷರು ಕಾಶ್ಮೀರದ ಕಾಹಿನಲ್ಲಿ ನಿಂತಲ್ಲೇ ನಿರ್ನಾಮವಾದರೂ ಸರಿ—ತಾವು ಒಂದು ಹನಿ ಕಣ್ಣೀರನ್ನೂ ಸುರಿಸುವುದಿಲ್ಲವಾಗಿ ಮಹಾತ್ಮರೆಂದರು. ಅದು ಭಾರತಕ್ಕೊಂದು ಅದ್ಭುತ ಮಾದರಿಯಾಗುವುದು. ಅಂತಹ ಧೀರ ಸಂರಕ್ಷಣೆ ಇಡೀ ಭಾರತಕ್ಕೆ ಅಂಟಿಕೊಳ್ಳುತ್ತದೆ. ಅದರಿಂದ ಹಿಂದು ಶೀಖ ಮುಸಲ್ಮಾನರು ಎಂದಾದರೂ ಶತ್ರುಗಳಾಗಿದ್ದರೆಂಬುದನ್ನು ನಾವು ಮರೆತುಬಿಡುವಂತಾಗುವುದು. ಆಗ ಎಲ್ಲ ಶೀಖ, ಹಿಂದು, ಮುಸಲ್ಮಾನರೂ ಗೆಳೆಯರಾಗಿದ್ದಿಲ್ಲವೆಂಬುದನ್ನು ಅರಿಯುವೆವು. ಎಲ್ಲ ಕುಲ ಧರ್ಮಗಳಲ್ಲೂ ಕೆಲವರು ಒಳ್ಳೆಯ ಗಂಡಸರೂ ಹೆಂಗಸರೂ ಇದ್ದಾರೆ. ವಿಶ್ವವು ತನ್ನ ಒಳ್ಳೆಯ ಗಂಡಸು ಹೆಂಗಸರ ಮೇಲೆಯೇ ನಿಂತಿದೆ. ದಂಗೆಪಡೆಯನ್ನೇ ಹುಚ್ಚು ಬಿಡಿಸಿ ಸಮಾಧಾನಕ್ಕೆ ತರಲಾದರೆ ನಿಜವಾಗಿಯೂ ತಾವು ಆಶ್ಚರ್ಯ ಪಡೆವೆಂದು ಮಹಾತ್ಮರೆಂದರು. ಅವರು ಭಜನೆಯ ಪಲ್ಲವನ್ನು ನೆನಪಿನಲ್ಲಿಡಲಿ.

> "ನಾವೆಲ್ಲರೂ ಒಬ್ಬ ದೇವನಿಂದಲೆ ಬಂದು
> ಅವನಿಗೇ ಸೇರಿರುವೆವು;
> ಯಾವ ಹೆಸರಿಂದವನ ಪೂಜಿಸಿದರೂ ಒಂದೆ
> ಭೇದವನು ಕಾಣದಿಹೆವು!"

ಬಿರ್ಲಾ ಭವನ, ಹೊಸದಿಲ್ಲಿ
೩೦—೧೦—೪೭

## ಅಹಿಂಸೆಯ ಕ್ರಿಯಾಪದ್ಧತಿ

ಇಂದು ಸಂಜೆ ಎಂದಿನಂತೆ ಪ್ರಾರ್ಥನೆಯ ಅಂಗವಾಗಿ ಕುರಾಣವನ್ನು ಪಠಿಸಲು ಯಾರದಾದರೂ ಅಕ್ಷೇಪವಿದೆಯೋ ಎಂದು ಕೇಳಲಾಗಿ ನೆರೆದವರಲ್ಲಿ ಒಬ್ಬನು ತನ್ನ ಅಕ್ಷೇಪವನ್ನು ಛಲದಿಂದ ಮುಂದೊಡ್ಡಿದನು. ಅಂಥ ಅಕ್ಷೇಪವೇನಾದರೂ ಬಂದರೆ ತಾವು ಬಹಿರಂಗವಾಗಿ ಪ್ರಾರ್ಥನೆಯನ್ನೂ ಮಾಡುವವರಲ್ಲ. ಸದ್ಯಃ ಪ್ರಶ್ನೆಗಳ ಮೇಲೆ ಸಾಮಾನ್ಯವಾಗಿ ಕೊಡುವ ಪ್ರಾರ್ಥನೋತ್ತರ ಭಾಷಣವನ್ನೂ ಕೊಡುವದಿಲ್ಲವೆಂದು ಗಾಂಧೀಜಿ ಮೊದಲೇ ನಿಚ್ಚಳವಾಗಿ ಹೇಳಿಬಿಟ್ಟಿದ್ದರು. ಅದರೂ ಗಾಂಧೀಜಿಯನ್ನು ಕಾಣದೆ ಚದರಿಹೋಗಲು ಜನಸಂದಣಿ ಒಪ್ಪದಾಯಿತು. ಅದುದರಿಂದ ಅವರು ವೇದಿಕೆಯನ್ನೇರಿ ಈ ತಮ್ಮ ನಿವೃತ್ತಿ ಕ್ರಮವಾದ ಕಾರಣಗಳನ್ನು ಮತ್ತು ತಮಗೆ ಗೋಚರವಾದ ಅಹಿಂಸೆಯ ಕ್ರಿಯಾಪದ್ಧತಿಯನ್ನು ಕುರಿತು ನಾಲ್ಕುಮಾತು ಹೇಳಿದರು.

ಇಂಥ ಪ್ರಾರ್ಥನೆಗೆ, ಅದೂ ಬ[illegible]ನಲ್ಲಿ ನಡೆದಾಗ, ಅಕ್ಷೇಪವೆತ್ತುವ[illegible] ಭೂಷಣವಲ್ಲವೆಂದರವರು. "ಹೀಗಿದ್ದ[illegible]ರಲ್ಲಿ ಪ್ರಚಂಡ ಬಹುಮತನವರು ಒಬ್ಬ ವಿರೋಧಕನನ್ನು ಎದೆಗೆಡಿಸುವ ಸಂಭವವಿರುವಾಗ ಒಬ್ಬನೇ ಒಬ್ಬ ಅಕ್ಷೇಪಕನನ್ನಾದರೂ ಕಡೆಗಣಿಸುವದು ತಪ್ಪೆಂದು ನನ್ನ ಅಹಿಂಸೆ ಎಚ್ಚರಿಸುತ್ತಿದೆ. ಇಡೀ ಸಭೆಯೇವಿರೋಧಿಸಿದ್ದರೆ ಅವಮಾತುಬೇರೆ. ಅಗನನ್ನ ಮೇಲೆ ಕೈಮಾಡುವ ಭಯವಿದ್ದರೂ ಪ್ರಾರ್ಥನೆಯನ್ನು ಜರಗಿಸಿಯೆ ತೀರುವದು ಕರ್ತವ್ಯವಾಗುತ್ತಿತ್ತು. ಆದರೂ ಒಬ್ಬ ಅಕ್ಷೇಪಕನಿಂದಾಗಿ ಬಹುಜನರು ನಿರಾಶರಾಗಬೇಕೆ ಎಂಬೊಂದು ಪ್ರಶ್ನೆಯೂ ನ್ಯಾಯ-ಇದಕ್ಕೆ ಉಪಾಯ ಬಹಳ ಸುಲಭ. ಬಹುಜನರು ಏಕಾಕಿ ವಿರೋಧಕನ ಮೇಲೆ ಯಾವ ಸಿಟ್ಟನ್ನಾಗಲಿ ಕೆಟ್ಟ ಹೇತುವನ್ನಾಗಲಿ ಇಡದೆ ಸಂಯಮದಿಂದಿದ್ದರೆ ಅಗ ಪ್ರಾರ್ಥನೆಯನ್ನು ಸಾಗಿಸುವದು ನನ್ನ ಕರ್ತವ್ಯವೆನಿಸೀತು. ಒಂದುವೇಳೆ ಇಡೀ ಸಭೆಯೇ ಮನಸು ಕೃತಿಗಳೆರಡರಲ್ಲೂ ಅಹಿಂಸಕವಾಗುಳಿದರೆ ಅಗ ಅಕ್ಷೇಪಕನೇ ಸ್ವತಃ ಸಂಯಮವನ್ನು ತೋರಿಸುವ ಸಂಭವವುಂಟು. ಇದೀಗ ಅಹಿಂಸೆಯ ಕ್ರಿಯಾರೀತಿಯೆಂದು ನನ್ನೆ

— ೯ನೆ ಪುಟಕ್ಕೆ

# ಗಾಂಧಿಯವರ ಪ್ರಾರ್ಥನೋತ್ತರ ಭಾಷಣಗಳು

( ೮ ನೇ ಪುಟದಿಂದ )

ಚಿಕೆ. ಇನ್ನು ಸತ್ಯ ಅಹಿಂಸೆಗಳೆಂಬವು ಕೆಲವೇಜನ ಕುಶಲರಿಗೆ ಮಾರಿಹೋಗಿಲ್ಲ. ಈಶ್ವರೀ ಆದೇಶಗಳೆಂಬ ಎಲ್ಲ ವಿಶ್ವ ನಿಯಮಗಳು ಸರಳವೂ ತಿಳಿದುಕೊಳ್ಳಲು ಸುಲಭವೂ ಮನಸೊಂದಿದ್ದರೆ ಆಚರಣೆಗೆ ಸಾಧ್ಯವೂ ಆಗಿವೆ. ಅವು ಕಠಿನವೆಂದು ಕಾಣಲು ಮಾನವ ಕುಲವನ್ನು ಆವರಿಸಿರುವ ಷ್ಯೈಗಳ್ಳತನವೇ ಕಾರಣ, ಮನುಷ್ಯನು ಪ್ರಗತಿಪರ ಜೀವಿ. ಪ್ರಕೃತಿಯಲ್ಲಿ ಯಾವದೂ ಇದ್ದಂತೆಯೆ ಉಳಿಯಲಾರದು. ಅಚಲವಾಗಿರುವ ವಸ್ತುವೆಂದರೆ ಪರಬ್ರಹ್ಮವೊಂದೇ! ಅದು ಮಾತ್ರ ಇದ್ದಂತಿತ್ತು, ಇದೆ, ಇರಲಿದೆ. ಅದ್ಧರೂ ಸದಾ ಚಲಿಸುತಿದೆ. ಸಾಕು, ಪರಬ್ರಹ್ಮದ ಗುಣಗಳನ್ನು ಕುರಿತು ತಲೆಕೆದರಿಕೊಳ್ಳುವದು ಬೇಡ, ಮುಖ್ಯವಾಗಿ ಮಾನವಕುಲ ಉಳಿಯಬೇಕೆಂದಿದ್ದರೆ ಅದು ದಿನದಿನವೂ ಸತ್ಯ ಅಹಿಂಸೆಗಳ ಅಂಕೆಗೆ ಒಳಗಾಗುತ್ತ ಹೋಗಬೇಕು. ಈ ಎರಡು ಆಚಾರನಿಯಮಗಳನ್ನು ಮನಸಿನಲ್ಲಿಟ್ಟುಕೊಂಡೇ ನಾವು ನೀವು ನಡೆಯಬೇಕು.

ಬಿರ್ಲಾಭವನ, ಹೊಸದಿಲ್ಲಿ,

೩೧—೧೦—೪೭

## ಅಪೂರ್ವ ಸದ್ವರ್ತನೆ

ಇಂದೂ ಗಾಂಧೀಜಿಯ ಪ್ರಾರ್ಥನಾ ಸಭೆಯಲ್ಲಿ ಕುರಾಣದ ವಾಕ್ಯಗಳನ್ನು ಪಠಿಸಲು ಇಬ್ಬರು ಆಕ್ಷೇಪ ಮಾಡಿದರು. ಅವರಲ್ಲೊಬ್ಬನು ನಿನ್ನೆಸಂಜೆ ಆಕ್ಷೇಪಿಸಿದವನೇ ಆಗಿದ್ದನು. ಆದರೆ ಇಬ್ಬರೂ ತಮ್ಮ ವಿರೋಧವನ್ನು ಬಹಳ ಸಂಯಮದಿಂದಲೇ ಪ್ರದರ್ಶಿಸಿದರು. ನೂರುಗಟ್ಟಲೆ ಸಭಿಕರಲ್ಲಿ ಒಬ್ಬಿಬ್ಬರು ವಿರೋಧಿಸುವರೆಂದು ಪ್ರಾರ್ಥನೆಯನ್ನೇ ಜರುಗಿಸದೆ ಉಳಿದವರನ್ನು ನಿರಾಶೆಗೊಳಿಸುವದು ತರವೇ?" ಎಂದು ಗಾಂಧೀಜಿ ಪ್ರಶ್ನಿಸಿದರು. "ಕುರಾಣ ಪಠನಕ್ಕೆ ಮನವೊಪ್ಪದವರು ಪ್ರಾರ್ಥನೆಗೆ ಬಾರದೆ ಉಳಿಯುವದು ಶಿಷ್ಟಾಚಾರಕ್ಕೆ ಒಪ್ಪುವ ಮಾತು. ಈ ಬಿಕ್ಕಟ್ಟಿನಿಂದ ತಪ್ಪಿಸಿಕೊಳ್ಳುವ ಒಂದೇ ಉಪಾಯವೆಂದರೆ ನಿನ್ನೆ ಸಂಜೆ ನಾನು ಹೇಳಿದಂತೆ ವಿರೋಧಕರಮೇಲೆ ಎಳ್ಳಷ್ಟು ಸಿಟ್ಟುಗೇಳದೆ ಇರುವದು" ಎಂದು ಅವರು ಸಭಿಕರಿಗೆ ಹೇಳಿದರು. ಪೋಲೀಸರಾದರೂ ಆಕ್ಷೇಪಕರನ್ನು ತಡೆಯದಿರಲೆಂದು ಅವರುಕೇಳಿಕೊಂಡರು. ಎಲ್ಲರೂ ಒಂದೇ ದನಿಯಿಂದ ಅವರ ಗೊಡವೆಗೆ ಹೋಗುವದಿಲ್ಲೆಂದು ಸಾರಿದರು. ಆಮೇಲೆ ಪ್ರಾರ್ಥನೆ ಪ್ರಾರಂಭವಾಯಿತು. ಸಭೆಗೆ ಅಕಸ್ಮಾತ್ ಬಂದಿದ್ದ ಶ್ರೀ ದಿಲೀಪ ಕುಮಾರ ರಾಯರು ಒಂದು ಭಜನೆಯನ್ನು ಹಾಡಿದರು.

ಪ್ರಾರ್ಥನಾನಂತರ ಗಾಂಧೀಜಿ ಆಕ್ಷೇಪಕರನ್ನು ಅವರು ತೋರಿದ ಅಪೂರ್ವಸಂಯಮಕ್ಕಾಗಿಯೂ ಜನರನ್ನು ಪರಿಪೂರ್ಣ ಶಾಂತರಾಗಿ ಉಳಿದುದಕ್ಕಾಗಿಯೂ ಅಭಿನಂದಿಸಿದರು.

## ಮನಸ್ಸೆಂದರೆ ದೇವರ ಗುಡಿ

ಶ್ರೀ. ದಿಲೀಪ ಕುಮಾರ ರಾಯರು ಹಾಡಿದ ಭಜನ ಪದ ವಿಷಯವಾಗಿ ಮಾತಾಡುತ್ತ ಗಾಂಧೀಜಿ ಹೇಳಿದ್ದು: ಪದದ ರಾಗ ಬಹಳ ಸರಳವಾಗಿದ್ದರೂ ಕುಶಲ ಗಾಯಕನ ಪಳಗಿದ ಕಂಠದಿಂದ ಹೊರಹೊಮ್ಮಿ ಅದಕ್ಕೊಂದು ಅಪೂರ್ವ ಮಾಧುರ್ಯ ಬಂದಿದೆ. ಪದದ ಪಲ್ಲವಿಯಲ್ಲಿ ಭಕ್ತನ ಮನಸ್ಸನ್ನು ದೇವರ ಗುಡಿಗೆ ಹೋಲಿಸಿದೆ. ಅಲ್ಲಿ ಪರಿಶುದ್ಧ ಪ್ರೇಮ ಶಾಶ್ವತವಾಗಿ ನೆಲಸಿ ಹೃದಯವನ್ನು ಬೆಳಗಿಸುತ್ತದೆ. ಹೃದಯದಲ್ಲಿ ಬೆಳಕಾದರೆ ದೃಷ್ಟಿ ಸ್ಫುಟವಾಗುವದು. ಅಹಿಂಸೆಯ ಪರಿಣಾಮವಿದು. ಪರಮಾತ್ಮನಲ್ಲಿ ನಟ್ಟು ನಿಲ್ಲದ ಮನಸು ಎಲ್ಲೆಲ್ಲೋ ಸುತ್ತಿ ಸುಳಿದು ಗುಡಿಯಲ್ಲಿರಬೇಕಾದ ಗುಣದಿಂದ ರಹಿತವಾಗುವದೆಂದು ತಾತ್ಪರ್ಯ.

## ಬಡವ— ಬಲ್ಲಿದ

ಬಳಿಕ ಗಾಂಧೀಜಿ ನಿರಾಶ್ರಿತರಲ್ಲಿ ಇನ್ನೂ ಉಳಿದುಹೋಗಿರುವ ಬಡವಬಲ್ಲಿದರೆಂಬ ಭೇದವನ್ನು ಪ್ರಸ್ತಾಪಿಸಿದರು. "ದಿಲ್ಲಿಯಲ್ಲಿಯೂ ಹಾಗೆಯೆ ನೌಖಾಲಿಯಲ್ಲಿಯೂ ಸಂಕಟಗ್ರಸ್ತ ಪ್ರದೇಶಗಳಿಂದ ಶ್ರೀಮಂತರು ಹೇಗಾದರೂ ಮಾಡಿ ಓಡಿಹೋಗಿ ಬಡವರನ್ನು ನಿಸ್ಸಹಾಯ ಸ್ಥಿತಿಯಲ್ಲಿ ಬಿಟ್ಟು ಬಿಡುವದನ್ನು ಕಂಡಿದ್ದೇನೆ. ಹೀಗಾಗಬಾರದು. ಶ್ರೀಮಂತರೂ ಅನುಕೂಲವಂತರೂ ಬಡವರಲ್ಲಿ ಆತ್ಮೀಯತೆಯನ್ನು ತೋರಬೇಕಲ್ಲದೆ ಅವರನ್ನು ಇರುಕಿನಲ್ಲಿ ಬಿಟ್ಟು ಪಲಾಯನ ಮಾಡುವದು ಸರಿಯಲ್ಲ. ಅವರೆಲ್ಲರೂ ಮುಳುಗಿದರೆ ಒಟ್ಟಾಗಿಯೆ ಮುಳುಗಬೇಕು. ಈಸಿದರೂ ಒಟ್ಟಾಗಿಯೆ ಈಸಬೇಕು. ಸಂಕಟಬಂದಾಗ ಉಚ್ಚನೀಚ ಬಡವ ಬಲ್ಲಿದ ಭೇದಗಳೆಲ್ಲ ಅಳಿಯಬೇಕು. ಅಗಲೆ ನಮ್ಮ ನಿರಾಶ್ರಿತ ಶಿಬಿರಗಳು ಸ್ವಚ್ಛತೆಯಲ್ಲಿಯೂ ಪ್ರಬಲ ಸಹಕಾರದಲ್ಲಿಯೂ ಆದರ್ಶವೆನಿಸಿಯಾವು.

## ಒತ್ತಾಯದ ಧರ್ಮಾಂತರ ಖಂಡನೀಯ

ಆಮೇಲೆ ಗಾಂಧೀಜಿ, ಕೆಲವು ಮುಸ್ಲಿಂ ಗೆಳೆಯರು ತಮ್ಮನ್ನು ಕಾಣ ಬಂದಿದ್ದರೆಂದು ತಿಳಿಸಿದರು. ನೂರುಗಟ್ಟಲೆ ಮುಸ್ಲಿಮರನ್ನು ಒತ್ತಾಯದಿಂದ ಹಿಂದು ಇಲ್ಲವೆ ಸೀಖ ಧರ್ಮಗಳಿಗೆ ಮತಾಂತರಗೊಳಿಸಲಾಗಿದೆಯೆಂದು ಅವರ ದೂರು. ಅಂಥ ಧರ್ಮಾಂತರಗಳು ನಿಜವಾಗಿದ್ದರೆ ಅವು ಖಂಡನೀಯವೆಂದು ಗಾಂಧೀಜಿ ನುಡಿದರು. ಬಲವಂತದಿಂದ ಒಲ್ಲದವರ ಮೇಲೆ ಹೇರುವ ವಸ್ತು ಧರ್ಮವಲ್ಲವೆಂದರವರು. ಹೀಗೆ ಧರ್ಮಾಂತರಗೊಳಿಸಲ್ಪಟ್ಟವರೆನಿಸುವವರೆಲ್ಲರೂ ಈ ಧರ್ಮಾಂತರ ಗ್ರಾಹ್ಯವಲ್ಲವೆಂದು ತಿಳಿದುಕೊಂಡು ತಮ್ಮ ಮೂಲ ಧರ್ಮಕ್ಕೆ ಮರಳುವ ಸ್ವಾತಂತ್ರ್ಯವನ್ನು ಇಟ್ಟುಕೊಳ್ಳಬೇಕು. ಇಸ್ಲಾಮಕ್ಕೆ ಧರ್ಮಾಂತರವಾದವರಿಗೂ ಈ ಮಾತು ಅನ್ವಯಿಸುತ್ತದೆ. ಇಲ್ಲದೆ ಹೋದರೆ ಇದರಿಂದ ಈ ಮೂರೂ ಧರ್ಮಗಳಿಗೆ ಮೃತ್ಯು ಬರುವದೆಂದು ತಿಳಿಯತಕ್ಕದ್ದು. ಅಲ್ಪಸಂಖ್ಯಾಕರು ಬಹುಸಂಖ್ಯಾಕರ ಭಯವಿಲ್ಲದೆ ಬಾಳುವಂತೆ ನೋಡಿಕೊಳ್ಳುವದು ಜನರ ಕರ್ತವ್ಯ. ಒಕ್ಕೂಟ ಹಿಂದುಸ್ತಾನದಿಂದ ಪಾಕಿಸ್ತಾನಕ್ಕೆ ಮುಸ್ಲಿಮರು ಹೋಗಬಯಸಿದರೆ ಅವರನ್ನು ಹೋಗಗೊಡಬೇಕು. ಆದರೆ ಇಲ್ಲಿಯೆ ಉಳಿಯಬೇಕೆಂಬ ಮುಸ್ಲಿಮರಿಗೆ ಯೋಗ್ಯ ಸಂರಕ್ಷಣೆಯನ್ನು ಕೊಡಲೇಬೇಕು. ಯಾವುದೇ ಅವಸ್ಥೆಯಲ್ಲಿ ಹಿಂಸೆಯನ್ನು ಪಯೋಗಿಸಲು ನನ್ನ ಸಮ್ಮತಿಯಿಲ್ಲ. ಆದುದರಿಂದ ನಮ್ಮಲ್ಲಿರುವ ನಿರಾಶ್ರಿತರು ಗೌರವದಿಂದಲೂ ಸುರಕ್ಷಿತವಾಗಿಯೂ ತಮ್ಮ ಮೊದಲಿನ ಮನೆಗಳಿಗೆ ಮರಳಬೇಕೆಂಬದೇ ನನ್ನ ಹೆಬ್ಬಯಕೆ. ಇಂದಿನ ಅನೈಸರ್ಗಿಕ ಅವಸ್ಥೆಯೆ ಶಾಶ್ವತವಾಗಿ ಉಳಿಯುತಿದ್ದರೆ ಅದನ್ನು ನೋಡಲು ನಾನು ಬದುಕಲಿಚ್ಛಿಸುವದಿಲ್ಲ.

ಬಿರ್ಲಾಭವನ, ಹೊಸದಿಲ್ಲಿ,

೧—೧೧—೪೭

## ಭಗವನ್ಮಂದಿರ

ನಿನ್ನಿನ ವಿರೋಧಕನು ಇಂದೂ ಗಾಂಧೀಜಿಯ ಪ್ರಾರ್ಥನಾ ಸಭೆಯಲ್ಲಿ ಕಾಣಿಸಿಕೊಂಡನು. ಕುರ್ರಾಣದ ಪಠನೆಗೆ ತನ್ನ ಅಸಮ್ಮತಿಯನ್ನು ನಮ್ರತೆಯಿಂದ ವ್ಯಕ್ತಗೊಳಿಸಿದ್ದಕ್ಕೆ ಗಾಂಧೀಜಿ ಆ ವಿರೋಧಕನನ್ನು ಅಭಿನಂದಿಸಿದರು. ಪ್ರಚಂಡ ಸಭೆಯಲ್ಲಿ ಉಳಿದವರೆಲ್ಲರೂ ಆ ವಿರೋಧಕನ ವಿಷಯಕ್ಕೆ ತಾವೇನೂ ಕ್ರೋಧಗೊಳ್ಳುವದಿಲ್ಲವೆಂದೂ ಅವನಿಗಾವ ಪೀಡೆಯನ್ನೂ ಒದಗಿಸುವದಿಲ್ಲೆಂದೂ ಸಾರಿದರು. ಆದರಿಂದ ಪ್ರಾರ್ಥನೆ ಸರಾಗವಾಗಿ ನಡೆಯಿತು. ದಿಲೀಪಕುಮಾರ ರಾಯರೇ ಭಜನೆಯನ್ನು ಹಾಡಿದರು. ಆ ಪದದ ಮೊದಲ ಚರಣದ ಅರ್ಥ ಭಕ್ತನಿರುವ ರಾಜ್ಯದಲ್ಲಿ ದುಃಖವಾಗಲಿ ವ್ಯಥೆಯಾಗಲಿ ಇಲ್ಲ, ಎಂದು ಗಾಂಧೀಜಿ ಹೇಳಿದರು. ಇದಕ್ಕೆ ಎರಡು ಅರ್ಥ ಹೇಳಬರ್ರುವುದು. ಒಂದು, ನಮ್ಮೀ ದೇಶದಲ್ಲಿ, ಅಂದರೆ ಭಾರತದಲ್ಲಿ, ದುಃಖವಾಗಲಿ ವ್ಯಥೆಯಾಗಲಿ ಇಲ್ಲ, ಎಂದಾಗಬಹುದು. ಆದರೆ ಈ ದೇಶದಲ್ಲಿ ದುಃಖವ್ಯಥೆಗಳಿಲ್ಲದಿದ್ದ ಯಾವ ಕಾಲವೂ ತಮ್ಮ ನೆನಪಿಗೆ ಬರಲೊಲ್ಲದೆಂದು ಗಾಂಧೀಜಿ ಹೇಳಿದರು. ಆದುದರಿಂದ ಮೊದಲನೆ ಅರ್ಥ ಬರಿ ಕವಿಸ್ಫೂರ್ತಿಜನ್ಯವಾದುದೆಂದು ಹೇಳಬೇಕು. ಎರಡನೆಯ ಅರ್ಥ ಆತ್ಮಕ್ಕೂ ಅದರ ನಿವಾಸವಾದ ದೇಹಕ್ಕೂ ಸಂಬಂಧಿಸಿದ್ದು. ಹೀಗೆ, ಆತ್ಮದ ನಿವಾಸವಾದ ದೇಹ ಗೀತೆಯ ಭಾಷೆಯಲ್ಲಿ ಹೇಳುವದಾದರೆ ನಿಜವಾಗಿ ಧರ್ಮಕ್ಷೇತ್ರವಾಗಿರಬೇಕಲ್ಲದೆ ಕ್ಷಣಿಕ ರಾಗ ದ್ವೇಷಗಳ ಜನ್ಮ ಭೂಮಿಯಾಗಿರತಕ್ಕದಲ್ಲ. ಸಾಧನೆಗೆ ಸಿದ್ಧಿ ದೊರಕಬೇಕಾದರೆ ಕ್ಷೇತ್ರದ ಒಡೆಯನು ಕಾಮ ಕ್ರೋಧ ಲೋಭಮೋಹಾದಿ ಅರಿಷಡ್ವರ್ಗಗಳಿಂದ ನಿರ್ಲಿಪ್ತನಾಗಿರಬೇಕು. ಮುಕ್ತಾವಸ್ಥೆಯನ್ನು ಬೇಕಾದವರು ಸಂಪಾದಿಸಲು ಸಾಧ್ಯವುಂಟು. ಅದು ಅಧಿಕ ಸಂಖ್ಯೆಯಲ್ಲಿ ಸಾಧ್ಯವಾದರೆ ಆಗ ಹಿಂದುಸ್ತಾನವನ್ನು ಕುರಿತು ಕವಿ ಕಟ್ಟಿದ ಕನಸು ಬೇಗನೆ ನನಸಾದೀತು. ಹಿಂದುಸ್ತಾನದ ಇಂದಿನ ದುರವಸ್ಥೆಯನ್ನು ಕುರಿತು ಮಾತಾಡುತ್ತ ಗಾಂಧೀಜಿ, ಕುರುಕ್ಷೇತ್ರ ನಿರಾಶ್ರಿತ ಶಿಬಿರದಿಂದ ಬಂದಿದ್ದ ಡಾಕ್ಟರಣಿಯೊಬ್ಬಳು ಬಣ್ಣಿಸಿದ ಸಂಗತಿಗಳನ್ನು ವಿವರಿಸಿದರು. ಅದೊಂದು ಅತ್ಯಂತ ದೀನ ದುಃಖಮಯ ದೃಶ್ಯ. ಅಲ್ಲಿ ಎಷ್ಟು ಡಾಕ್ಟರರು, ಎಷ್ಟು ಔಷಧಗಳು, ಎಷ್ಟು ಅರಿವೆ ಅಂಚಡಿ, ಬೆಚ್ಚನ್ನಬಟ್ಟೆ ಇದ್ದರೂ ಸಾಲದು. ಅನೇಕರಿಗೆ ಉಟ್ಟ ಅರಿವೆ ಬದಲಿಸಲು ಕೂಡ ಮಾರ್ಗವಿಲ್ಲ. ಚಿಕ್ಕ ಹಸುಳೆಗಳ ಹಾಸುಂದಿರಿಗೆ ಅವುಗಳನ್ನು ಬೆಚ್ಚಗಿರಿಸಬೇಕಾದರೆ ಸಾಕೋಸಾಕಾಗಿ ಹೋಗುತಿದೆ.

## ಶೇಖ ಅಬ್ದುಲ್ಲಾ

ಆ ಮೇಲೆ ಗಾಂಧೀಜಿಯವರು ಕಾಶ್ಮೀರದ ಕಡೆಗೆ ಮನಶ್ಚಕ್ಷುಗಳನ್ನು ಹೇಳಿಸಲು ಸಭಿಕರನ್ನು ಕೇಳಿಕೊಂಡರು; ಅಲ್ಲಿನ ಜನರ ಸ್ಥಿತಿಗತಿಗಳನ್ನು ಚಿತ್ರಿಸಿಕೊಳ್ಳಬೇಳಿದರು. "ತರೆ ಮೇಲೆ ಕಾಶ್ಮೀರಕ್ಕೆ ಹೊರಟ ವಿಮಾನಗಳ ಸದ್ದನ್ನು ಕೇಳಿದ ಕೂಡಲೆ, ನನ್ನ ಹೃದಯ ಮುಖ್ಯಮಂತ್ರಿ ಶೇಖ ಅಬ್ದುಲ್ಲಾ ಮತ್ತು ಅವರ ಜನರನ್ನು ನೆನೆದುಕೊಳ್ಳುತ್ತದೆ. ಶೇಖ ಅಬ್ದುಲ್ಲಾರು ಎಲ್ಲರ ಗೆಳೆಯರು. ಮನುಷ್ಯ ಮನುಷ್ಯರಲ್ಲಿ ಭೇದ ಮಾಡಲರಿಯರು. ಅವರು ಮುಸ್ಲಿಮರ ಪ್ರತಿನಿಧಿಯಾಗಿರುವಂತೆ ಮುಸ್ಲಿಮೇತರರ ಪ್ರತಿನಿಧಿಯೂ ಹೌದು. ಜನರು ಭಯದಿಂದ ಕಾಶ್ಮೀರ ಬಿಟ್ಟು ಪಲಾಯನ ಮಾಡುವದನ್ನು ಬಿಡಬೇಕು. ಅವರು ಧೀರರೂ ನಿರ್ಭಯರೂ ಆಗಲು ಯತ್ನಿಸಬೇಕು. ತಮ್ಮ ಮನೆಯನ್ನು ರಕ್ಷಿಸುವಾಗ ಪ್ರಾಣವನ್ನಾದರೂ ಬಲಿಗೊಡಲು ಸಿದ್ಧರಾಗಬೇಕು. ಬಾಲ ವೃದ್ಧರೆನ್ನದೆ ಸ್ತ್ರೀ ಪುರುಷರೆನ್ನದೆ ಎಲ್ಲರಿಗೂ ಈ ಮಾತು ಅನ್ವಯಿಸುತ್ತದೆ. ಎಲ್ಲ ಸೈನಿಕರೂ ಎಲ್ಲ ಕಾಶ್ಮೀರಿ ಪ್ರಜೆಗಳೂ ಸುಂದರ ಕಾಶ್ಮೀರದ ರಕ್ಷಣೆಯಲ್ಲಿ ಪ್ರಾಣತೆತ್ತರೆ ನಾನದಕ್ಕೆ ಮರುಗಲಾರೆ. ಅಫ್ರಿದಿಗಳೂ ಇತರ ಸುಲಿಗೆಗಾರರೂ ಕಾಶ್ಮೀರವನ್ನು ಅದರ ಪಾಡಿಗೆ ಬಿಟ್ಟಿದ್ದರೆ!"

## ಕುರುಕ್ಷೇತ್ರದ ನಿರಾಶ್ರಿತರು

ಕೊನೆಯದಾಗಿ ಗಾಂಧೀಜಿ ಹೇಳಿದ್ದು: ಕುರುಕ್ಷೇತ್ರದ ನಿರಾಶ್ರಿತರ ಪಾಡು ಭಯಾನಕವಾಗಿದ್ದರೆ ಪಾಕಿಸ್ತಾನದ ನಿರಾಶ್ರಿತರ ಅವಸ್ಥೆ ಅದಕ್ಕಿಂತ ಸುಖಮುಖವಾಗಿರಲಾರದು. ಈಗ ನಡೆದಿರುವ ಹುಚ್ಚಾಟಕ್ಕೆ ಇಂಥ ಅಗಾಧ ಬೆಲೆ ತೆತ್ತದ್ದೂ ಸಾಲದೆ? ಆದುದರಿಂದ ಜನರು ವಿಚಾರ ಮಾಡಲಿ. ದುಃಖ ನಿವಾರಣೆಗೆ ನಾವು ಕೈಕೊಳ್ಳಬಹುದಾದ ಪರಮೋಪಾಯವೆಂದರೆ ಎಲ್ಲ ದ್ವೇಷವನ್ನೂ ಮರೆತು ಪ್ರತಿಯೊಬ್ಬ ಮುಸ್ಲಿಮನನ್ನೂ ಇತರರನ್ನೂ ನಮ್ಮ ಗೆಳೆಯರೆಂದು ಭಾವಿಸುವದು.

ಬಿರ್ಲಾಭವನ, ಹೊಸದಿಲ್ಲಿ,

ತಾ. ೨—೧೧—೪೭

## ಸಂಪೂರ್ಣ ಸಹಕಾರ ಅಗತ್ಯ

ಎಂದಿಗಿಂತ ಹೆಚ್ಚಿಗೆ ಪ್ರೇಕ್ಷಕರು ಇರುವದಾಗಿಯೂ ಕುರಾನಪಠನಕ್ಕೆ ಹತ್ತು ಜನರು ಆಕ್ಷೇಪಕರಿರುವರಾಗಿಯೂ ಶ್ರೀ. ಬ್ರಿಜಕೃಷ್ಣರು ತಿಳಿಸಿದರು. ಈ ಆಕ್ಷೇಪಕರಲ್ಲಿ ಹಳೆಯಗೆಳೆಯನೊಬ್ಬನು. ಆದರೆ ಈ ಆಕ್ಷೇಪಕರುಸಂಪೂರ್ಣ ನಯವಿನಯ ನಿಗ್ರಹಗಳಿಂದ ಕೂಡಿದವರಾಗಿದ್ದರು. ತಮ್ಮ ಆಕ್ಷೇಪವನ್ನು ಆಡದೆ ನುಂಗಿಕೊಂಡವರೂ ಅನೇಕರಿದ್ದ ಬಗೆಗೆ ಗಾಂಧೀಜಿಯವರಿಗೆ ಆರುಹಲಾಯ್ತು. ಅದಕಾರಣ ಗಾಂಧೀಯವರು ತಮ್ಮ ಪ್ರಾರ್ಥನೆಯ ಮುನ್ನ ನೆರೆದವರನ್ನು ಕುರಿತು ಇಂತು ಮುಂತಾಗಿ ಮಾತಾಡಿದರು.—

"ಜನರು ತಮ್ಮ ಆಕ್ಷೇಪವನ್ನು ನಿರಾತಂಕವಾಗಿ ಅರುಹಿದ್ದಕ್ಕಾಗಿ ನನಗೆ ಸಂತೋಷವೆನಿಸಿದೆ. ಜನತೆ ಪ್ರಾರ್ಥನೆಗೆ ಅಥವಾ ದೇವಪೂಜೆಗೆ ನನ್ನ ಬಳಿ ನೆರೆಯದೆ ನಾನು ಮಹಾತ್ಮನೆಂದು ಬಗೆದೋ ಇಲ್ಲವೆ ನಾನು ದೇಶಕ್ಕೆ ಸುದೀರ್ಘ ಸೇವೆಸಲ್ಲಿಸಿದವನೆಂದೋ ಬರುತ್ತಿರುವರಾಗಿ ನನಗೆ ತುಂಬ ವಿಷಾದವೆನಿಸುತ್ತದೆ. ಇಲ್ಲಿಯದು ಸರ್ವಸಮನ್ವಯ ಪ್ರಾರ್ಥನೆ. ದೇವರು ಅನೇಕ ನಾಮಗಳಿಂದ ಗುರುತಿಸಲ್ಪಡುತ್ತಾನೆ. ಪ್ರಪಂಚದ ಜನಸಂಖ್ಯೆಯಿದ್ದಷ್ಟು ದೇವರ ನಾಮಸಂಖ್ಯೆಯುಂಟೆಂದು ಮೊನ್ನೆ ಅಂದಂತೆ ಕೊನೆಗೆ ವಿಶ್ಲೇಷಿಸಿ ಹೇಳಬೇಕಾಗುತ್ತದೆ. ಪಶುಪಕ್ಷಿಗಳು ಕಲ್ಲು ಮಣ್ಣು ಕೂಡ ದೇವರನ್ನು ಕೊಂಡಾಡುವವೆಂದು ಹೇಳಿದ್ದು ಸಮರ್ಪಕವೇ ಆಗಿದೆ. ಭಜನಾವಲಿಯಲ್ಲಿ ಮುಸಲ್ಮಾನ ಸಾಧು ಒಬ್ಬರಿಂದ ರಚಿತವಾದ ನುಡಿಯೊಂದು ಇದೆ. ಅದರಲ್ಲಿ ಅವರು, ಹಕ್ಕಿಗಳು ಸಂಜೆಮುಂಜಾವುಗಳಲ್ಲಿ ಚಿಲಿಪಿಲಿಗುಟ್ಟಿ ಸೃಷ್ಟಿಕರ್ತನ ಘನತೆಯನ್ನು ಕೊಂಡಾಡುವವು ಎಂಬುದಾಗಿ ಉಲ್ಲೇಖಿಸಿದ್ದಾರೆ. ದೇವರ ಸ್ತುತಿಯು ಕುರಾನದಿಂದೊ ಅಥವಾ ಇನ್ನಾವುದೋ ಧರ್ಮಗ್ರಂಥದಿಂದೊ ಎತ್ತಿಕೊಂಡದ್ದೆಂಬ ಕಾರಣದಿಂದ ಪ್ರಾರ್ಥನೆಗೆ ಆತಂಕ ಒಡ್ಡುವದರಲ್ಲಿ ಹುರುಳಿಲ್ಲ. ಹಲಕೆಲವು ಮುಸಲ್ಮಾನರ ಲೋಪದೋಷಗಳು ಅದೆಷ್ಟೇ ಇರಲಿ— ಇಂತಹರು ಅದೆಷ್ಟೇ ಪ್ರಮಾಣದಲ್ಲಿದ್ದರೂ... ಆಕ್ಷೇಪವು ಮುಸಲ್ಮಾನ ಜನಾಂಗಕ್ಕೇ ಅನ್ವಯಿಸಲಾರದು ಎಂದ ಮೇಲೆ ಅವರ ಧರ್ಮಗುರುವಿಗೂ ಆ ಮಹಾಪುರುಷನ ಸಂದೇಶಕ್ಕೂ ಆ ಬಗೆಯ ಆಕ್ಷೇಪ ಅನ್ವಯಿಸುವದಂತೂ ದೂರದೇ ಉಳಿಯಿತು. ನಾನು ಕುರಾಣವನ್ನೆಲ್ಲ ಕೂಲಂಕಷವಾಗಿ ಓದಿದ್ದೇನೆ. ಅದರಿಂದ ನನಗೆ ಲಾಭವಲ್ಲದೆ ಎಳ್ಳಷ್ಟು ಹಾನಿಯೊದಗಿಲ್ಲ. ಜಗತ್ತಿನ ಎಲ್ಲ ಧಾರ್ಮಿಕ ಗ್ರಂಥಗಳನ್ನು ಓದಿದಷ್ಟು ನಾನು ಒಳ್ಳೆಯ ಹಿಂದುವಾಗುತ್ತಿರುವೆನೆಂದು ನನಗೆ ಅನಿಸುತ್ತದೆ. ಕುರಾಣವನ್ನು ವಿರೋಧಿಸಿ ಟೀಕಿಸುವವರು ಇವಾವುದರಿಂದುದನ್ನು ಬಾಕು ಬಲ್ಲೆ. ಅನೇಕರು ಮುಸಲ್ಮಾನ ಗೆಳೆಯರ ಓರ್ವ ಮುಂಬಯಿ ಸ್ನೇಹಿತರು ನನಗೊಂದು ಗಹನ ಪ್ರಶ್ನೆ ಕೇಳಿದ್ದಾರೆ. ಕಾಫರರ ಬಗ್ಗೆ ಪೈಗಂಬರರು ಏನೆಂದು ಉಪದೇಶಿಸಿದ್ದಾರೆ? ಕುರಾಣವು ಹಿಂದುಗಳನ್ನು ಕಾಫರರೆಂದು ಪರಿಗಣಿಸುವದಿಲ್ಲವೆ? ಎಂಬುದೇ ಆ ಪ್ರಶ್ನೆ. ಹಿಂದುಗಳು ಕಾಫರರಲ್ಲವೆಂಬುದಾಗಿ ಅವರಿಗೆ ಎಂದೋ ಮನವರಿಕೆಯಾಗಿದ್ದರೂ ಅವರು ತಮ್ಮ ಮುಸಲ್ಮಾನ ಗೆಳೆಯರಿಗೆ ಈ ಬಗ್ಗೆ ಕೇಳಿದರು. ಆ ಗೆಳೆಯರು ಪೂರ್ಣ ಪ್ರಜ್ಞೆಯಿಂದಲೇ ಉತ್ತರಿಸಿದರು. ಕುರಾಣದೃಷ್ಟಿಯಲ್ಲಿ ನಾಸ್ತಿಕರು ಮಾತ್ರ ಕಾಫರರೆಂದು ಅವರು ಹೇಳಿದರು. ಹಿಂದುಗಳು ಆಸ್ತಿಕರಾದ ಕಾರಣ ಒಬ್ಬ ದೇವರನ್ನು ನಂಬಿದವರಾದ ಕಾರಣ ಅವರು ಕಾಫರರಲ್ಲವೆಂಬುದಾಗಿ ಅವರು ನುಡಿದರು. ಕುರಾಣ ವಿರೋಧಿಗಳ ಟೀಕೆಗೆ ನೀವು ಕಿವಿಗೊಟ್ಟರೆ ಅವರು ಕುರಾಣವನ್ನೂ ಪೈಗಂಬರರನ್ನೂ ಕೂಡಿಯೇ ತಿರಸ್ಕರಿಸಿ ಪಡಾಕನಾಡಿಬಿಡುವರು. ಅಂತಹ ಕೆಲ್ಲಗೆ ಶ್ರೀ ಕೃಷ್ಣನು ಕೂಡ ೧೬೦೦೦ ಗೋಪಿಕಾಸ್ತ್ರೀಯರ ಮಧ್ಯದಲ್ಲಿದ್ದ ಸ್ತ್ರೀಲಂಪಟನಾಗಿ ಕಾಣುವನು. ನನ್ನ ಕೃಷ್ಣನು ಅಕಲಂಕನು, ಪವಿತ್ರ ಚರಿತ್ರನು. ನಾನು ಎಂದಾದರೂ ಓರ್ವ ಲಂಪಟನಿಗೆ ಹೀನ ಚರಿತ್ರನಿಗೆ ತಲೆಬಾಗಬಹುದೇ? ಅದೆಂದಿಗೂ ಇಲ್ಲ. ನನ್ನೊಡನೆ ದಿನವೂ ಸಂಜೆ ಕೈಮುಗಿದು ನೀವುಮೊರೆಹೋಗುವ ದೇವರು ಸರ್ವವ್ಯಾಪಿಯು ಮತ್ತು ಸರ್ವಸಮರ್ಥನು, ಆವನು ನಿಮ್ಮೆಲ್ಲರಲ್ಲಿಯೂ ಅವಿತಿದ್ದಾನೆ. ಅದ್ದರಿಂದ ನಿಮಗೆ ಹಗೆಗಳೇ ಇಲ್ಲ, ನೀವು ಯಾರಿಗೂ ಹೆದರಬೇಕಾಗಿಲ್ಲ. ಯಾಕೆಂದರೆ ನಿಮ್ಮಲ್ಲಿ ಮತ್ತು ನಿಮ್ಮೊಡನೆ ದೇವರು ಪ್ರತಿಕ್ಷಣವೂ ನಿಂತಿರುವನಲ್ಲವೆ? ಸಾಮೂಹಿಕ ಪ್ರಾರ್ಥನೆಯ ರಹಸ್ಯ ಹೀಗಿರುವ ಕಾರಣ ನೀವು ಸರ್ವಾಂತಃಕರಣದಿಂದ ಮತ್ತು ನಿರಾತಂಕವಾಗಿ ಈ ಪ್ರಾರ್ಥನೆಯಲ್ಲಿ ಸಹಕರಿಸದಿದ್ದರೆ ನನಗೆ ಈ ಬಗೆಯ ಪ್ರಾರ್ಥನೆಯೇ ಬೇಡ. ನಮ್ಮನ್ನು ಸುತ್ತುವರಿದ ಕಗ್ಗತ್ತಲೆಯನ್ನು ಚದುರಿಸಲು ದಿನದಿನವೂ ನೀವು ಶಕ್ತಿಸಂಚಯ ಮಾಡಬೇಕಿದ್ದರೆ ಈ ಪ್ರಾರ್ಥನೆಯಲ್ಲಿ ಅನ್ಯೋನ್ಯ ಸಹಕಾರ ಅತ್ಯಗತ್ಯ."

ಇಂತುಮುಂತಾಗಿ ಗಾಂಧೀಜಿ ಹೇಳಿ ಈ ಬಗೆಯ ಪ್ರಾರ್ಥನೆ ಬೇಕೇ ಬೇಡವೇ ಎಂಬ ಬಗ್ಗೆ ನಿರ್ಭೀತಿಯಿಂದ ತಮ್ಮ ಅಭಿಪ್ರಾಯ ವ್ಯಕ್ತಪಡಿಸಬೇಕೆಂದು ಪ್ರೇಕ್ಷಕರಿಗೆ ಕೇಳಿದರು. ಆಗ ಪ್ರೇಕ್ಷಕರು ಅತ್ಯುತ್ಸಾಹದಿಂದ, ಈ ಪ್ರಾರ್ಥನೆ ಬೇಕೆಂದೂ ಯಾರಾದರೂ ಆಕ್ಷೇಪಣೆ ಎತ್ತಿದರೆ ತಾವು ಅಂತಹ ಆಕ್ಷೇಪಕರ ವಿಷಯವಾಗಿ ಕೋಪಿಸುವದಿಲ್ಲವೆಂದೂ ಈರ್ಷೆ ಪಡುವದಿಲ್ಲವೆಂದೂ ಹೇಳಿದರು. ಆ ಮೇಲೆ ಎಂದಿನಂತೆ ಪ್ರಾರ್ಥನೆ ಮುಂದುವರಿದಿತು. ಗುರುದೇವನ ಮೊಮ್ಮಗಳು ನಂದಿತಾ ಕೃಷ್ಣ ಕೃಪಲಾನಿ ಇಂದಿನ ಸಂಜೆಯ ಭಜನಗೀತೆ ಹಾಡಿದರು.

## ಅನುಕೂಲ ಕಾಲ

ಕಾಶ್ಮೀರದಲ್ಲಿ ನಡೆದ ಯುದ್ಧದ ಮಾಹಿತಿ ಗಾಂಧೀಜಿ ಇಂತು ನುಡಿದರು:—

"ಹಿಂದೀ ಒಕ್ಕೂಟವು ದಂಡಾಳುಗಳನ್ನೂ ಸರ್ವ ಸಹಾಯವನ್ನೂ ಕಳುಹುತ್ತಿದೆ. ಹಿಂದುಸ್ತಾನ ಸರಕಾರಕ್ಕೆ ಸ್ವಂತದ ವಿಮಾನಗಳಿಲ್ಲದಾಗ ಖಾಸಗಿ ಕಂಪನಿಯವರು ತಮ್ಮ ವಿಮಾನಗಳನ್ನು ಸರಕಾರಕ್ಕೆ ಒಪ್ಪಿಸಲು ಮುಂದೆ ಬಂದುದಕ್ಕೆ ನನಗೆ ತುಂಬ ಸಂತೋಷವಾಗಿದೆ. ಸುವ್ಯವಸ್ಥಿತ ಸೈನ್ಯಕ್ಕೂ ಸುವ್ಯವಸ್ಥಿತ ಸರಕಾರಕ್ಕೂ ಕಾಲವು ಅನುಕೂಲವಾಗಿದೆ ಮತ್ತು ದಾಳಿಗಾರರಿಗೆ ಅದು ಪ್ರತಿಕೂಲವಾಗಿದೆ.

## ಅಝಾದ ಹಿಂದ ಅಧಿಕಾರಿಗಳು

"ದಿವಂಗತ ಶ್ರೀ ಸುಭಾಸಚಂದ್ರ ಬೋಸರ ನೇತೃತ್ವದಲ್ಲಿ ಶೌರ್ಯದಿಂದ ಹೋರಾಡಿದ ಅಝಾದ ಹಿಂದ ಫೌಜಿನ ಇಬ್ಬರು ಅಧಿಕಾರಿಗಳ ಹಿರಿತನದಲ್ಲಿ ಕಾಶ್ಮೀರದ ದಾಳಿಗಾರರ ಚಟುವಟಿಕೆಗಳು ನಡೆದಿವೆ ಎಂದು ತಿಳಿದು ನನಗೆ ತುಂಬ ವಿಷಾದವಾಗಿದೆ. ಆ ಸೈನ್ಯದಲ್ಲಿ ಹಿಂದುಗಳು, ಮುಸಲ್ಮಾನರು, ಶೀಖರು ಎಲ್ಲರೂ ಇದ್ದರು. ಅವರವರು ತಮ್ಮ ತಮ್ಮ ಧರ್ಮವನ್ನು ಕಾಪಾಡಿಕೊಂಡಿದ್ದರೂ ಅವರಲ್ಲಿ ಜಾತಿ ರೀತಿಯ ಭೇದ ಭಾವನೆಗಳಿದ್ದಿಲ್ಲ. ಸ್ನೇಹಮಯ ಬಾಂಧವ್ಯ ಅವರನ್ನು ಹಿಡಿದಿರಿಸಿತು. ತಾವು ಭಾರತೀಯರೆಂಬ

— ೧೦ ನೇ ಪುಟಕ್ಕೆ

## ಜನತೆಯ ಸ್ವರಾಜ್ಯ

( ೬ ನೇ ಪುಟದಿಂದ )

ಹೆಚ್ಚಾಗಿ ಧಾನ್ಯಗಳನ್ನವಲಂಬಿಸಿದೆ. ಮಾಂಸ, ಮೀನು, ಮೊಟ್ಟೆ, ಹಾಲು ಸಿಗದಿರುವಾಗ ಚೆನ್ನಾಗಿ ಶುದ್ಧಮಾಡಿದ ಧಾನ್ಯಗಳನ್ನು ತಿಂದು ಪೌಷ್ಟಿಕ ದ್ರವ್ಯಗಳಿಲ್ಲದೆ ನಾವು ಅನೇಕ ರೋಗರುಜೆಗಳಿಗೆ ತುತ್ತಾಗುತ್ತೇವೆ.

### ದನಕರುಗಳನ್ನು ಕಡಿಯುವುದರಿಂದ ಉಂಟಾದ ಸಮಸ್ಯೆ

ಸಸ್ಯಾಹಾರದಲ್ಲಿ ಹಾಲು ಮುಖ್ಯಾಂಗ. ಪಟ್ಟಣಿಗರೂ ಮತ್ತು ಮಿಲಿಟರಿಯವರು ಕರೆವಪಶುಗಳನ್ನು ಯದ್ವಾತದ್ವಾ ಕಡಿಯುತ್ತಿರುವುದರಿಂದ ನಾಡಿನಲ್ಲಿ ಒಳ್ಳೆಯ ಜಾತಿಯ ಪ್ರಾಣಿಗಳೇ ಇಲ್ಲದಂತಾಗಿದೆ. ಈ ಸಮಸ್ಯೆಯತ್ತ ಜನರು ಲಕ್ಷ್ಯಕೊಡಬೇಕು.

### ಸಸ್ಯಜತೈಲ ಮತ್ತು ವನಸ್ಪತಿ

ಸಾರ್ವಜನಿಕರಿಗೆ ಕೊಬ್ಬಿನ ಮತ್ತೊಂದು ಆಂದೆಂದರೆ ಸಸ್ಯಜ ತೈಲಗಳು. ಈ ಇಂಬು ಸಾಬೂನು, ನಯಗೊಳಿಸಲು ಬಳಸುವ ಎಣ್ಣೆ ಮುಂತಾದ ಕೈಗಾರಿಕೆಯ ವಸ್ತುಗಳ ತಯಾರಿಕೆಗೆ ಬೇಕಾಗಿ ಊಟಕ್ಕೆ ಉಪಯೋಗಿಸಲು ಸಿಗದಂತಾಗಿವೆ. ಸಿಗುವ ಎಣ್ಣೆಗಳ ಪೌಷ್ಟಿಕಾಂಶಗಳೂ ವನಸ್ಪತಿ ಗಿರಣಿಗಳಿಗೆ ಕೊಡುವುದರಿಂದ ನಾಶವಾಗಿ ಹೋಗಿವೆ. ಹೊಸದಾಗಿ ತಯಾರಿಸಿದ ಗಾಣದೆಣ್ಣೆಗಳಲ್ಲಿಯ ಪೌಷ್ಟಿಕ ಗುಣ ಅವುಗಳಲ್ಲಿರದು. ಕೆಲವು ಸರಕಾರಗಳಂತೂ ತಾವೇ ವನಸ್ಪತಿ ಗಿರಣಿಗಳನ್ನು ನಡೆಸಲು ಮುನ್ನುಗ್ಗಿವೆ.

### ಸಕ್ಕರೆ ಇಲ್ಲವೆ ಬೆಲ್ಲ

ಸಕ್ಕರೆಯಿಂದ ನಮ್ಮ ಕಸುವಿನ ಕೆಲವಂಶವನ್ನು ನಾವು ಪಡೆಯುತ್ತೇವೆ. ಬಿಳಿಯ ಸಕ್ಕರೆಗಿಂತ ಹೆಚ್ಚು ಪೌಷ್ಟಿಕವಾದ ಬೆಲ್ಲದಿಂದ ನಾವು ಕೇವಲ ಕಸುವನ್ನಲ್ಲದೆ ಖನಿಜ ಮತ್ತು ಲವಣದ್ರವ್ಯಗಳನ್ನು ಪಡೆಯುತ್ತೇವೆ. ಆದುದರಿಂದ ಬಿಳಿಯ ಸಕ್ಕರೆಗಿಂತ ಬೆಲ್ಲಕ್ಕೇ ಹೆಚ್ಚು ಪ್ರಾಶಸ್ತ್ಯ ಸಲ್ಲಬೇಕಾಗಿದೆ.

ನಾವು ಆಗಲೇ ಧಾನ್ಯಗಳ ಕೊರತೆಯನ್ನು ಕಂಡೆವು. ಹಾಗಿದ್ದರೂ ಒಳ್ಳೆಯಧಾನ್ಯ ಬೆಳೆವ ಭೂಮಿಯಲ್ಲಿ ಕಬ್ಬನ್ನು ಬೆಳೆಸಲಾಗುತ್ತಿದೆ ಮತು ಬೆಲ್ಲ ತಯಾರಿಸಲು ಅನುಕೂಲವಾದ ತಾಳೆಮರಗಳು ಹಾಳಾಗುತ್ತಿವೆ.

ಪಾನನಿರೋಧದ ಯಾವ ಯೋಜನೆಯೇ ಆಗಲಿ,ಬೆಲ್ಲದ ತಯಾರಿಕೆಯನ್ನು, ತಾಳೆಯ ಮರಗಳನ್ನು ಬೆಳೆಸಲು ಪ್ರೋತ್ಸಾಹ ಕೊಡಬೇಕು. ಆಗ ಯಾವ ಸೇರೆಇಳಿಸುವವನೂ ತನ್ನ ಪರಂಪರಾಗತ ಉದ್ಯೋಗವನ್ನು ಕಳೆದು ಕೊಳ್ಳಬೇಕಾಗಿಲ್ಲ.

### ಬಟ್ಟೆ

ನಾವು ಒಂದು ವಸ್ತುವನ್ನು ಕೊಳ್ಳುವಾಗ ನಮ್ಮ ಹುಟ್ಟುವಳಿಯಲ್ಲಿ ಕೆಲವಂಶವನ್ನು ಕೊಡಬೇಕಾಗುತ್ತದೆ. ಹಳ್ಳಿಗರು ಬಟ್ಟೆಬರೆಗಳನ್ನು ಕೊಳ್ಳುವಾಗ ಅವರು ಬೆಳೆದ ಧಾನ್ಯ ದವಸಗಳಲ್ಲಿ ಕೆಲವಂಶವನ್ನು ಕೊಟ್ಟು ಬಿಡಬೇಕಾಗುತ್ತದೆ. ಹಾಗೆ ಮಾಡದೆ ವಿರಾಮ ಕಾಲದಲ್ಲಿ ಅವರು ತಮಗೆ ಬೇಕಾದ ಬಟ್ಟೆಯನ್ನು ತಾವೇ ನೆಯ್ದುಕೊಂಡರೆ ಈಗ ಅದಕ್ಕಾಗಿ ಅವರು ಕೊಡಬೇಕಾದ ದವಸವನ್ನು ಉಳಿಸಿಕೊಳ್ಳಬಹುದು.

### ಚರ್ಮ

ಚರ್ಮದ ಸಾಮಾನುಗಳನ್ನು ನಮ್ಮ ದೇಶದಲ್ಲೇ ತಯಾರಿಸಲಾರಂಭಿಸಿದರೆ ಈಗ ನಿರ್ಯಾತ ಮಾಡಲಾಗುತ್ತಿರುವ ಕೋಟಿಗಟ್ಟಲೆ ರೂಪಾಯಿ ಬೆಲೆಬಾಳುವ ಹಸಿ ತೊಗಲು ಇಲ್ಲೇ ಉಳಿದು ಲಕ್ಷಗಟ್ಟಲೆ ಚಮಗಾರರಿಗೆ ಉದ್ಯೋಗ ದೊರೆಯುತ್ತದೆ. ಈ ಕೈಗಾರಿಕೆಯಲ್ಲಿ ನಮ್ಮ ಚಮ್ಮಾರರಿಗೆ ಶಿಕ್ಷಣಕೊಡಲು ಏನನ್ನೂ ಮಾಡಲಾಗುತ್ತಿಲ್ಲ.

### ದೀಪದೆಣ್ಣೆಗಳು

ದೀಪ ಹಚ್ಚಲು ಸೀಮೆಯ ಎಣ್ಣೆಯನ್ನು ಕೊಳ್ಳಲು ನಮ್ಮ ಹಳ್ಳಿಗರು ಕೋಟಿಗಟ್ಟಲೆ ರೂಪಾಯಿಗಳನ್ನು ಸುರಿಯುತ್ತಿದ್ದಾರೆ. ,ಕಾಡಿನಲ್ಲಿಯ ಎಣ್ಣೆಯ ಬೀಜಗಳನ್ನು ಗಾಣಕ್ಕೆಕೊಟ್ಟು ಎಣ್ಣೆ ತೆಗೆದು ಹಣತಿಗಳಲ್ಲಿ ಉಪಯೋಗಿಸಿದರೆ ಕೋಟಿಗಟ್ಟಲೆ ರೂಪಾಯಿಗಳ ಉಳಿತಾಯವಾಗುತ್ತದೆ. ಹಳ್ಳಿಗಳಲ್ಲಿ ಸೀಮೆಯೆಣ್ಣೆಯ ಬಳಕೆಯನ್ನು ಬಹಿಷ್ಕರಿಸಬೇಕು ಮತ್ತು ನಗರಗಳಲ್ಲಿ ಅದ ಬಳಕೆ ಲೈಸನ್ಸ್ ಇಟ್ಟು ನಿಯಂತ್ರಿಸಲ್ಪಡಬೇಕು.

### ಕೈಯಿಂದ ಮಾಡಿದ ಕಾಗದ

ಕಾಗದದ ಪೂರಯಿಕೆಗೆ ಯುರೋಪ್ಯ ದೇಶಗಳನ್ನವಲಂಬಿಸಿದ್ದರಿಂದ ನಮ್ಮ ದೇಶದಲ್ಲಿ ಇಂದು ಕಾಗದದ ತುಟಾಗ್ರತೆ ಬಹಳವಾಗಿದೆ. ಕಾಗದ ಮಾಡುವುದು ನಮ್ಮ ನಾಡಿನ ಹಳೆಯ ಕಸಬು ಎಲ್ಲ ಬಗೆಯ ಕಾಗದಕ್ಕೂ ನಮ್ಮಲ್ಲಿ ಕಚ್ಚಾ ಮಾಲಿದೆ; ಕೈಕಾಗದ ತಯಾರಿಕೆಯ ಜಾಣ್ಮೆಯಿದೆ; ಅದಕ್ಕೆ ಸ್ವಲ್ಪ ಪ್ರೋತ್ಸಾಹ ಮಾತ್ರ ಅವಶ್ಯವಾಗಿದೆ.

## ಅಹಿಂಸೆಯೆತ್ತ; ಖಾದಿಯೆತ್ತ?

ಲೇ— ಮೋ. ಕ. ಗಾಂಧಿ

ಕಾಠೇವಾಡದಿಂದ ಓರ್ವನು ಕೆಳಗಿನಂತೆ ಬರೆದಿದ್ದಾನೆ—

"ಎಷ್ಟೋ ಜಿಲ್ಲೆಗಳ ಅಥವಾ ಪ್ರಾಂತಗಳ ಜನರಂತೆಯೇ ಕಾಠೇವಾಡ ಜನರಾದರೂ ಅಹಿಂಸೆ ಮತ್ತು ಖಾದಿಗಳ ಮೇಲೆ ಇದ್ದ ಶ್ರದ್ಧೆಯನ್ನು ಕಳೆದುಕೊಳ್ಳಹತ್ತಿದ್ದಾರೆ ಎಷ್ಟೋ ಕಾಂಗ್ರೆಸಿಗರು ಮತ್ತು ಗಾಂಧಿವಾದಿಗಳು ರಾಜಕಾರಣದ ವಿಷಯಗಳಲ್ಲಿ ಅಹಿಂಸೆಯು ಪ್ರಯೋಜನಕಾರಿಯಾಗಲಾರದು ಎಂದು ಇತ್ತೀಚೆಗೆ ವಾದಿಸಹತ್ತಿದ್ದಾರೆ."

ಈ ರೀತಿಯಲ್ಲಿ ತಮ್ಮ ವಿಚಾರ ಸರಣಿಯನ್ನು ಅನೇಕ ಉದಾಹರಣೆಗಳನ್ನು ಕೊಟ್ಟು ಸಮರ್ಥಿಸಲು ಈ ಲೇಖಕರು ತಮ್ಮ ಪತ್ರದಲ್ಲಿ ಪ್ರಯತ್ನಿಸಿದ್ದಾರೆ. ಆದರೆ ಆ ಪತ್ರದಲ್ಲಿರುವ ಮುಖ್ಯ ಭಾವವನ್ನೂ ಅವರ ಪತ್ರದಲ್ಲಿಯ ಮೇಲಿನ ವಾಕ್ಯಗಳನ್ನೂ ಎತ್ತಿ ಕೊಟ್ಟಿದ್ದೇನೆ. ಅವರ ವಾದದಲ್ಲಿ ಮೂರು ಮುಖ್ಯ ದೋಷಗಳಿವೆ.

ಕಾಠೇವಾಡದಲ್ಲಿಯೇ ಆಗಲಿ ಹಿಂದುಸ್ತಾನದ ಇತರ ಭಾಗಗಳಲ್ಲಿಯೇ ಆಗಲಿ ಅಹಿಂಸೆಯಲ್ಲಾಗಲೀ ಖಾದಿಯಲ್ಲಾಗಲೀ ಅವರಿಗೆ ನಿಜವಾದ ವಿಶ್ವಾಸವೇ ಇರಲಿಲ್ಲವೆಂದು ಇತ್ತೀಚೆಗೆ ನಾನು ತಿಳಿಸುತ್ತಲೇ ಬಂದಿರುವೆ. ಅಹಿಂಸೆಯ ಪ್ರತೀಕವಾದ ಖಾದಿ ಧಾರಿಗಳಾಗಿ ಜನರು ಅಹಿಂಸೆಗೆ ಅಂಟಿಕೊಂಡಿದ್ದಾರೆಂಬ ಭಾವನೆಯನ್ನು ನಾನು ಮಾಡಿಕೊಂಡು ನನ್ನಷ್ಟಕ್ಕೆ ನಾನೆ ಮೋಸಹೊಂದಿದ್ದು ನಿಜ. ಅಹಿಂಸೆಯ ಹೆಸರಿನಿಂದ ಜನರು ದುರ್ಬಲರ ಶಾಂತವೃತ್ತಿಯನ್ನು ಬಹಿರಂಗವಾಗಿ ತೋರಿಸುತ್ತಿದ್ದುದು ವಸ್ತುಸ್ಥಿತಿಯಾಗಿತ್ತು. ಈ ಜನರು ತಮ್ಮ ಹೃದಯದಲ್ಲಿ ಹುದುಗಿದ್ದ ಹಿಂಸೆಯನ್ನು ಓಡಿಸಲು ಕೂಡ ಪ್ರಯತ್ನಿಸಿರಲಿಲ್ಲ. ಈ ಮಾತಿನ ಸತ್ಯವನ್ನು ವಿಚಾರ ಮಾಡುವ ಎಲ್ಲರೂ ತಮ್ಮಷ್ಟಕ್ಕೆ ತಾವೇ ಮನಗಾಣಬಹುದಾಗಿದೆ. ನಾನು ರಾಜಕೋಟಕ್ಕೆ ಹೋದಾಗ ಅಲ್ಲಿ 'ರಾಮ' ನಿದ್ದಿಲ್ಲ. ಆದುದರಿಂದ ಕಾಠೇವಾಡದಲ್ಲಿಯೂ ಇರಲಿಲ್ಲವೆಂದು ಹೇಳಬಹುದು. ಈಗ ಜನರು ತಮ್ಮ ನಿಷ್ಠೆಯನ್ನು ಕಳೆದುಕೊಳ್ಳಹತ್ತಿರುವರೆಂದು ಹೇಳುವದು ಸರಿಯಾಗಲಾರದು.

ರಾಜಕಾರಣದಲ್ಲಿ ಅಹಿಂಸೆಯು, ಫಲಕಾರಿಯಾಗಬಹುದೇ? ಎಂದು ಈಗ ಪ್ರಶ್ನೆ ಮಾಡುವದೂ ಅಯೋಗ್ಯವಾದುದು. ವಿದೇಶಿಯ ಪ್ರಭುತ್ವದ ವಿರುದ್ಧ ಜನರು ಹೂಡಿದ ಹೋರಾಟವು ರಾಜಕಾರಣವಲ್ಲದೆ ಏನಿತ್ತು? ನಿಜವಾಗಿಯೂ ಈಗ ನಡೆದ ಅಪಕೀರ್ತಿಪ್ರದವಾದ ಭ್ರಾತೃಯುದ್ಧದಲ್ಲಿ ರಾಜಕಾರಣ ಅಷ್ಟೊಂದು ಇರಲಾರದು. ದೇಶದಲ್ಲೆಲ್ಲ ಅಧರ್ಮವು ಧರ್ಮದ ಹೆಸರಿನಿಂದ ಆಚರಿಸಲ್ಪಡಹತ್ತಿದೆ. ವಿದೇಶಿ ಪ್ರಭುತ್ವದೊಡನೆ ಹೋರಾಟ ನಡೆಸಿದಾಗ ಬಹಿರಂಗವಾಗಿ ನಟಿಸುವ ಶಾಂತಿಯು ಕೂಡ ಇಂದು ಲಯವಾಗಿದೆ.

ಪತ್ರಬರೆದವರು ಕಾಂಗ್ರೆಸಿಗರು ಗಾಂಧೀವಾದಿಗಳು ಎಂಬ ಭೇದ ಕಲ್ಪಿಸುವಲ್ಲಿಯೂ ದೋಷವು ಅಡಕವಾಗಿದೆ. ಈ ತರದ ಭೇದ ಮಾಡಲು ಅವಕಾಶವೇ ಇಲ್ಲ. ಗಾಂಧೀವಾದಿ ಯಾರಾದರೂ ಇದ್ದರೆ ನಾನೊಬ್ಬನೇ. ಆದರೆ ಈ ರೀತಿಯಲ್ಲಿ ಹೇಳಲು ನಾನು ಮುಂದೆಬಾರದಷ್ಟು ದಾಕ್ಷಿಣ್ಯವೃತ್ತಿಯುವನಿರುವೆನೆಂದು ನಾನು ಭಾವಿಸುವೆ. ಗಾಂಧೀವಾದಿ ಎಂದರೆ ಗಾಂಧೀಭಕ್ತನೆಂದು ಹೇಳಬಹುದು. ಭಕ್ತನಿರಬೇಕಾದರೆ ಪೂಜ್ಯವಸ್ತುವಾದ ದೇವರೊಬ್ಬನಿರಲೇಬೇಕಾಗುವದು. ನಾನೇನೂ ದೇವರೆಂದೂ ನನ್ನನ್ನೇ ಎಲ್ಲರೂ ಪೂಜಿಸಬೇಕೆಂದು ನಾನೆಲ್ಲಿಯೂ ಹೇಳುವ ಧಂಡತನಕ್ಕೀದಿಲ್ಲ. ಆದುದರಿಂದ ನನ್ನ ಭಕ್ತರಾರೂ ಇರಲಾರರು. ಯಾರು ತಾವು ಗಾಂಧೀವಾದಿಗಳೆಂದು ಹೇಳಿಕೊಳ್ಳುತ್ತಿರುವರೋ ಅವರೆಲ್ಲರೂ ಕಾಂಗ್ರೆಸಿಗರಿಲ್ಲವೆಂದು ಯಾರು ತಾನೇ ಹೇಳಬಹುದು? ಕಾಂಗ್ರೆಸ ಸದಸ್ಯತ್ವದ ನಾಲ್ಕಾಣೆ ಫೀ ಕೊಟ್ಟು ಕಾಂಗ್ರೆಸ ಸದಸ್ಯರ ಯಾದಿಯಲ್ಲಿ ಹೆಸರಿಲ್ಲದ ಲಕ್ಷಾಂತರ ಕಾಂಗ್ರೆಸ ಸೇವಕರಿದ್ದಾರೆ. ನಾನೇ ಇಂಥ ವರ್ಗದವನೆಂದು ಓದುಗರು ಅರಿಯಬೇಕು. ಆದುದರಿಂದ ನನಗೆ ಪತ್ರಬರೆದವರು ಮಾಡಿದ ಭೇದವು ಅರ್ಥರಹಿತವಾದುದು. ದೇಶದಲ್ಲಿ ಈಗ ಅನೇಕ ಘಟನೆಗಳು ನಡೆಯುತ್ತಲಿವೆ. ಅವುಗಳಲ್ಲಿ ನನ್ನ ಅಂಗವೇನೂ ಇಲ್ಲ. ನಾನು ಅವುಗಳ ಬಗ್ಗೆ ಹೇಳಿದ್ದೂ ನಡೆಯುವದಿಲ್ಲವೆಂದು ನಾನು ಅನೇಕ ಸಲ ಹೇಳುತ್ತಲೇ ಬಂದಿರುವೆ.

ಕಾಂಗ್ರೆಸು ಅಧಿಕಾರ ಸ್ವೀಕರಿಸಿದಾಗಲೇ ಸಂತೋಷದಿಂದ ಅಹಿಂಸೆಗೆ ಶರಣು ಹೊಡೆಯಿತೆಂಬುದು ಗುಪ್ತವಾದ ವಿಷಯವೇನೂ ಅಲ್ಲ. ಆಹಾರ ಮತ್ತು ಬಟ್ಟೆಯ ಸೀದಾ ಪದ್ಧತಿಯು ರಾಷ್ಟ್ರಕ್ಕೆ ಅಪಾಯಕಾರಕವೆಂದು ನನ್ನ ದೃಢ ನಂಬಿಗೆ ಇದೆ. ನನ್ನ ಮಾತು ನಡೆಯುವಂತಿದ್ದರೆ ಹಿಂದುಸ್ತಾನದ ಹೊರಗಿನಿಂದ ಒಂದು ಕಾಳನ್ನೂ ನಾನು ಕೊಂಡು ತರಿಸುತ್ತಿರಲಿಲ್ಲ. ದೇಶದಲ್ಲಿ ಸಾಕಷ್ಟು ಆಹಾರ ಧಾನ್ಯವಿದೆ ಎಂದು ಇಂದಿಗೂ ನನ್ನ ಬಲವಾದ ನಂಬುಗೆ ಇದೆ. ನಿಯಂತ್ರಣಾಜ್ಞೆಗಳ ಮೂಲಕ ಹಳ್ಳಿಗರು ಆಹಾರ ಧಾನ್ಯಗಳನ್ನು ಬಚ್ಚಿಡುವದು ಅಗತ್ಯವೆಂದು ಭಾವಿಸಿಕೊಂಡಿದ್ದಾರೆ. ಜನರು ನನ್ನ ಮಾತು ಕೇಳುವದಾದರೆ ಹಿಂದೂ-ಶೀಖ ಮುಸಲ್ಮಾನರಲ್ಲಿ ಭಯಂಕರ ಹೊಡೆದಾಟಗಳಾಗಲಾರವು. ಈ ಮೊದಲು ಜನರು ನನ್ನ ಮಾತು ಕೇಳುತ್ತಿದ್ದರೆಂದು ನಾನು ಭಾವಿಸಿಕೊಂಡಂತೆ ಈಗ ನಾನೇನೂ ಬಳಕೆಯಲ್ಲಿದ್ದ ನಾಣ್ಯವಲ್ಲ. ನಾನು ಹೇಳುವದೆಲ್ಲ ಈಗ ಅರಣ್ಯರೋದನವು.

ಖಾದಿಯ ಬಗ್ಗೆ ಹೇಳುವದಾದರೆ ಈಗ ಖಾದಿಯ ಅಹಿಂಸೆಯ ಪ್ರತೀಕವಾದ ವಸ್ತುವಾಗಿಲ್ಲ. ಅಹಿಂಸೆಯೇ ಖಾದಿಯ ಮೂಲ ಅದನ್ನು ಅಹಿಂಸೆಯಿಂದ ಕಿತ್ತಿ ತೆಗೆದರೆ ಖಾದಿಗೆ ಎನೋ ಒಂದು ತರದ ಸ್ಥಾನವಿರಬಹುದು. ಖಾದಿಗೆ ಬೆಂಬಲ ಕೊಡುವದು ದೊಡ್ಡಸ್ತಿಕೆಯ ಲಕ್ಷಣವಾದಂತಾಗಿರುವದರಿಂದ ರಾಜಕಾರಣದಲ್ಲಿರುವವರು ಅದಕ್ಕೆ ಬೆಂಬಲಕೊಡುತ್ತಾರೆ, ಇಂದು ಖಾದಿಗೆ ಮರ್ಯಾದೆ ಉಳಿದಿಲ್ಲ. ಗಿರಣಿ ಬಟ್ಟೆಗೇ ಗೌರವ ಬಂದಿದೆ. ಗಿರಣಿಗಳಿರದಿದ್ದರೆ ಲಕ್ಷಾಂತರ ಜನರು ಬತ್ತಲೆತಿರುಗಬೇಕಾಗುವದೆಂಬ ಭ್ರಾಮಕಭಾವನೆ ನಮ್ಮ ಜನರ ತಲೆಯಲ್ಲಿ ಸೇರಿದೆ. ಇದಕ್ಕಿಂತಲೂ ದೊಡ್ಡ ಭ್ರಮೆ ಬೇರೆ ಯಾವುದಾದರೂ ಇರಬಹುದೇ?

ದೇಶದಲ್ಲಿ ನಮಗೆ ಸಾಕಾಗುವಷ್ಟು ಹತ್ತಿಯನ್ನು ನಾವು ಬೆಳೆಯುತ್ತೇವೆ. ಬೇಕಾದಷ್ಟು ಕೈಮಗ್ಗಗಳೂ ಕೈರಾಟೆಗಳೂ ದೇಶದಲ್ಲಿ ಇವೆ. ಹಿಂದುಸ್ತಾನದಲ್ಲಿ ನೂಲುವ ನೇಯುವ ಕಲೆ ಹೊಸದಲ್ಲ. ಈ ಕಲೆ ಮೊದಲಿನಿಂದಲೂ ಅವಗತವಾದುದು. ಆದರೆ ಏನಕೇನ ಕಾರಣದಿಂದ ಲಕ್ಷಾಂತರ ಜನರು ನೂಲಲು ಹಾಗು ನೂತ ನೂಲನ್ನು ತಮ್ಮ ಉಪಯೋಗಕ್ಕಾಗಿ ನೇಯಲು ಸಿದ್ಧರಾಗಲಾರರೆಂಬ ಭೀತಿಯು ನಮ್ಮನ್ನು ಆವರಿಸಿದೆ. ಪಿಶಾಚಗ್ರಹಸ್ತನು ಭಯಕ್ಕೆ ಕಾರಣವೇನೂ ವಿರದಿದ್ದರೂ ಭಯಭೀತನಾಗುವನು. ಎಷ್ಟೋ ಜನರು ರೋಗಕ್ಕಿಂತ ರೋಗದ ಹೆಸರು ಕೇಳಿ ಭೀತರಾಗಿ ಅದೇ ಭೀತಿಯಿಂದಲೇ ಮರಣಹೊಂದುವದನ್ನು ನಾವು ನೋಡುವದಿಲ್ಲವೆ?

ಹೊಸದಿಲ್ಲಿ ೨೫—೧೦—೪೭

## ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣಗಳು

( ೯ ನೇ ಪುಟದಿಂದ )

ಬಗ್ಗೆ ಅವರಿಗೆ ಹೆಮ್ಮೆಯೆನಿಸಿತ್ತು. ಅವರ ಬಿಡುಗಡೆಯ ನಂತರ ಹೋಗೂ ಆ ಮುನ್ನ ದಿಲ್ಲಿಯ ಕೋಟೆಯೊಳಗೂ ನಾನು ಅವರನ್ನು ಕಂಡಿದ್ದೆ. ಇವರೇಕೆ ದಾಳಿಗಾರರ ಮುಖಂಡರಾದರೋ ಅಥವಾ ಆದೇಕೆ ಊರುಕೇರಿಗಳನ್ನು ಸುಡಲು ಅದರಂತೆ ನಿರಪರಾಧಿಗಳಾದ ಹೆಂಣು ಗಂಡುಗಳನ್ನು ಹುಡುಗರನ್ನು ಆದೇಕೆ ಕೊಲ್ಲಲು ಮುಂದಾದರೋ ನಾನಂತೂ ಅರಿಯದವನಾಗಿದ್ದೇನೆ, ಆಫ್ರಿದೀ ಜನರಿಗೂ ಇನ್ನುಳಿದ ಗುಡ್ಡಗಾಡು ಜನಗಳಿಗೂ ಮಾಡಬಾರದ್ದನ್ನು ಮಾಡಲು ಹುರಿದುಂಬಿಸಿ ಅವರಿಗೆ ಇವರು ಕೇಡು ಬಗೆಯುತ್ತಿದ್ದಾರೆ. ನಾನು ಅವರ ಸ್ಥಳದಲ್ಲಿದ್ದುದಾಗಿದ್ದರೆ ಆ ಗುಡ್ಡಗಾಡು ಜನರನ್ನು ಅಂತಹ ಹೊಲ್ಲದ ಕೆಲಸದಿಂದ ಪರಾವೃತ್ತಮಾಡಲು ಹೆಣಗುತ್ತಿದ್ದೆ. ಶೇಖ ಅಬ್ದುಲ್ಲಾರು ಇಸ್ಲಾಮಕ್ಕೂ ಹಿಂದುಸ್ತಾನಕ್ಕೂ ಕೆಡಕುಮಾಡುವರೆಂದು ಅವರಿಗೆ ಅನಿಸಿದ್ದರೆ ಹಾಗೆಂದು ನೇರವಾಗಿ ಶೇಖ ಅಬ್ದುಲ್ಲಾರನ್ನು ಅವರು ಸಂಧಿಸಬೇಕಿತ್ತು. ಈ ನನ್ನ ಸಂದೇಶವು ಈ ಅಧಿಕಾರಿಗಳ ಕಿವಿಗೂ ಗುಡ್ಡಗಾಡು ಜನರಕಿವಿಗೂ ಬೀಳುವದೆಂದೂ ಅವರು ಅಲ್ಲದ ಕೃತ್ಯದಿಂದ ಪರಾವೃತ್ತರಾಗುವರೆಂದೂ ಆಶಿಸುತ್ತೇನೆ."

### ಪಾಕಿಸ್ತಾನವು ಹುರಿದುಂಬಿಸುತ್ತಿದೆ

"ಕಾಶ್ಮೀರದ ಈ ದಾಳಿಯನ್ನು ಪಾಕಿಸ್ತಾನ ಸರಕಾರವು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಪ್ರೋತ್ಸಾಹಿಸುತ್ತಿದೆ ಎಂಬ ನನ್ನ ನಿರ್ಧಾರ ದೃಢವಾಗಿದೆ. ಗಡಿನಾಡಿನ ಮುಖ್ಯಮಂತ್ರಿಗಳು ಬಹಿರಂಗವಾಗಿಯೇ ಈ ದಾಳಿಯನ್ನು ಪ್ರೋತ್ಸಾಹಿಸಿದ್ದಲ್ಲದೆ ಇಸ್ಲಾಂಜಗತ್ತಿಗೆ ಸಹಾಯ ನೀಡಲು ಬೇಡಿಕೊಂಡರೆಂದೂ ನನಗೆ ತಿಳಿದುಬಂದಿದೆ. ಕಾಶ್ಮೀರಕ್ಕೆ ನೆಹರೂ ಸರಕಾರವು ಮೋಸದಿಂದ ಸಹಾಯ ನೀಡಿದೆಯೆಂದೂ ಹಿಂದೀ ಒಕ್ಕೂಟಕ್ಕೆ ಅದು ಸೇರುವದು ಅನೇಕ ದಿನಗಳ ಸಂಚೆಂದೂ ಆರೋಪಿಸಿದ್ದನ್ನು ನಾನು ಪತ್ರಿಕೆಯ ಮುಖಾಂತರ ಅರಿತಿದ್ದೇನೆ. ಪಾಕಿಸ್ತಾನದ ಮಂತ್ರಿಯೋರ್ವ ಇಂತಹ ಹೊಣೆಗೆಟ್ಟ ಆರೋಪಗಳನ್ನು ತನ್ನ ನೆರೆಯ ನಾಡಿನ ಬಗ್ಗೆ ಮಾಡಿದ್ದು ತುಂಬ ಸೋಜಿಗದ ಸಂಗತಿಯಾಗಿದೆ. ಕಾಶ್ಮೀರದ ಬಗ್ಗೆ ನಾನೇಕೆ ಮಾತುಎತ್ತಿದೆ ಹೇಳಲೆ? ನನ್ನ ಮಿತ್ರರಿಂದ ಕಾಶ್ಮೀರದ ಬಗ್ಗೆ ಹಿಳ್ಳೆಯ ಸಮಾಚಾರಬಂದಿದ್ದು ನಿಮ್ಮೊಡನೆ ಅದನ್ನು ಸವಿಯಬೇಕೆನ್ನುತ್ತೇನೆ. ಕಾಯಿದೆ ಅಜಂರವರು ಪಾಕಿಸ್ತಾನದ ಶತ್ರುವೆಂದು ಹಿಂದುಸ್ತಾನವನ್ನು ಮನಸ್ಸಿನಲ್ಲಿಟ್ಟುಕೊಂಡು ಹೊರಡಿಸಿದ ಹೇಳಿಕೆಯೊಡನೆ ಈ ಸಮಾಚಾರ ಹೊಂದುಗೂಡುವಂತಿಲ್ಲವೆಂದು ನನಗನಿಸುತ್ತದೆ. ಕರಾಚಿಯ ಓರ್ವ ಹಿಂದು ಮಿತ್ರರು, ಇನ್ನೊಬ್ಬರು ಲಾಹೋರದವರು ನನ್ನನ್ನು ಕಂಡರು. ಅವರಿಬ್ಬರೂ ಪರಿಸ್ಥಿತಿ ಮುನ್ನಿಗಿಂತ ಹಸನಾಗಿದೆಎಂದು ಅರುಹಿದರಲ್ಲದೆ ದಿನದಿನವೂ ಅದು ಹಸನಾಗುತ್ತ ಸಾಗಿದೆ ಎಂಬುದಾಗಿ ನುಡಿದರು. ಶೀಖ ಸ್ನೇಹಿತನಿಗೆ ಆಶ್ರಯಕೊಟ್ಟ ಮತ್ತು ಗ್ರಂಥಸಾಹೇಬಕ್ಕೆತಕ್ಕ ಮಾನದಿಂದ ಒಂದು ಪ್ರತ್ಯೇಕ ಕೋಣೆಯ ವ್ಯವಸ್ಥೆ ಮಾಡಿದ ಒಂದಾದರೂ ಮುಸಲ್ಮಾನ ಕುಟುಂಬ ತಾನು ನೋಡಿದ್ದಾಗಿ ಆ ಮಿತ್ರರು ಹೇಳಿದರು. ಇದರಂತೆ ಹಿಂದುಗಳು ಮತ್ತು ಶೀಖರು ಮುಸಲ್ಮಾನರಿಗೆ ಆಶ್ರಯಕೊಟ್ಟ ಉದಾಹರಣೆಗಳೂ ಅನೇಕವಾಗಿವೆ.

ಘೋರ ಪಾತಕಪ್ರಾಯವಾದ ಅಸಂಖ್ಯಾಕ ಜನವಿನಿಮಯಕ್ಕಾಗಿ ಎಷ್ಟೋ ನನ್ನ ಮುಸ್ಲಿಂ ಮಿತ್ರರು ನನ್ನೊಡನೆ ಖತಿಗೊಂಡಿದ್ದಾರೆ. ಹಿಂದುಸ್ತಾನದಲ್ಲಿ ಶೀಖ ಮತ್ತು ಹಿಂದು ನಿರಾಶ್ರಿತರು ಕಷ್ಟಕ್ಕೀಡಾದಂತೆ ಪಾಕಿಸ್ತಾನದಲ್ಲಿ ಮುಸಲ್ಮಾನ ನಿರಾಶ್ರಿತರೂ ಕಷ್ಟಪಡುತಿದ್ದಾರೆ ಎಂಬುದಾಗಿ ಅವರು ಹೇಳುತ್ತಾರೆ. ತಮ್ಮ ಮನೆಮಠಗಳಿಂದ ವಂಚಿತವಾದ ಈ ಅಪಾರ ಜನಸಾಗರವನ್ನು ಯಾವ ಸರಕಾರ ಮರಳಿ ಸುಖವಾಗಿರಿಸಬಲ್ಲದು? ನುಗ್ಗಿ ಹೊರಟ ನೀರಿನ ಮಹಾಪ್ರವಾಹದಂತಹ ಈ ಪ್ರಚಂಡ ಜನನಿರ್ಗಮನವನ್ನು ಹೇಗಾದರೂ ತಡೆಯಬಹುದೇ? ಎಂಬುದಾಗಿ ಆ ಮುಸಲ್ಮಾನ ಮಿತ್ರರು ನನಗೆ ಕೇಳಿದರು. ತಡೆಯಬಹುದು. ಅರ್ಥಾತ್ ತಳಬುಡವಿಲ್ಲದ ಆರೋಪ ಪ್ರತ್ಯಾರೋಪ ನಿಂತಂದು, ಇಲ್ಲದ ಸಾಶಂಕವೃತ್ತಿ ದೂರಾದಂದು ಇದು ತಾನಾಗಿ ನಿಶ್ಚಯವಾಗಿ ನಿಲ್ಲುವದು. ದೇವರು ಈ ನಮ್ಮ ದುರ್ದೈವಿ ದೇಶಕ್ಕೆ ಸುಬುದ್ಧಿ ಕೊಡಲೆಂದು ನನ್ನೊಡನೆ ನೀವೂ ಪ್ರಾರ್ಥಿಸಬೇಕಾಗಿ ಬೇಡುತ್ತೇನೆ. ಆಕ್ಷೇಪಕಸಂಯಮಕ್ಕಾಗಿ ಅವರು ಮತ್ತು ಪ್ರಾರ್ಥನೆ ಸುಗಮವಾಗಿ ಸಾಗುವಂತೆ ಅನುವುಕೊಟ್ಟದ್ದಕ್ಕಾಗಿ ನಾನು ಅವರನ್ನು ಅಭಿನಂದಿಸುತ್ತೇನೆ."

## ನಾಲ್ಕು ಮಾತು — ರಂಗನಾಥ ದಿವಾಕರ

### ಕಾಶ್ಮೀರ

ಪಾಕಿಸ್ತಾನವು ಒಂದು ಸ್ವತಂತ್ರ ರಾಜ್ಯವಾಯಿತೆಂದರೆ ಹಿಂದುಸ್ತಾನ ಹಾಗು ಪಾಕಿಸ್ತಾನ ಇವೆ ... ಬೇಕಾದಾಗ ಯುದ್ಧವಾಗುವ ಸಂಭವವಿರುವದು ಎಂದು ನಾನು ಎಷ್ಟೋಸಾರೆ ಅಂದುಕೊಂಡಿರಲಿಕ್ಕೆ ಸಾಕು. ಯಾವ ಮನೋರಚನೆಯಿಂದ ಪಾಕಿಸ್ತಾನದ ರಚನೆ ಆಯಿತೋ ಯಾವ ವಿಚಾರದಿಂದ ಪಾಕಿಸ್ತಾನವೆಂಬುದೊಂದು ಪೂರ್ಣ ಪ್ರತ್ಯೇಕ ಸ್ವತಂತ್ರ ರಾಜ್ಯವಾಗಬೇಕು ಎಂದು ಮುಸ್ಲಿಂಲೀಗಿನವರು ಹಟ ಹಿಡಿದು ಅದನ್ನು ಮಾಡಿಕೊಂಡರೋ ಆ ಮನೋರಚನೆಯಲ್ಲಿ ಅತ್ಯಂತಿಕ ವಿರೋಧ ಹಾಗೂ ದ್ವೇಷ ಇವು ತುಂಬಿಕೊಂಡಿದ್ದವು. ಒಂದಿಲ್ಲೊಂದು ದಿನ ಹಿಂದುಸ್ತಾನ ಪಾಕಿಸ್ತಾನಗಳ ನಡುವೆ ಯುದ್ಧವಾಗೇ ತೀರಲಿಕ್ಕೆ ಆ ಮನೋರಚನೆ ಹಾಗೂ ಆ ವಿಚಾರ ಇವೇ ಕಾರಣ. ಆ ಮನೋರಚನೆಯಲ್ಲಿ ಬದಲಾವಣೆಯಾದವಿನಾ ಈ ಎರಡೂ ನೆರೆ ರಾಜ್ಯಗಳಿಗೆ ಶಾಂತಿ ಸಮಾಧಾನಗಳು ದೊರೆಕವು.

x x x

ಈಗ ಇವೆರಡರ ನಡುವೆ ಪ್ರತ್ಯಕ್ಷ ಯುದ್ಧವಿಲ್ಲ ಎಂಬುದು ಸರಿ. ಎಲ್ಲಿಯೂ ಯಾವಮುಖದಲ್ಲಿಯೂ ಪಾಕಿಸ್ತಾನದ ಸೈನ್ಯ ಹಾಗು ಹಿಂದುಸ್ತಾನದ ಸೈನ್ಯ ಇವು ಎದುರುಬದುರು ನಿಂತು ಹೋರಾಡುವದು ನಮಗೆ ಕಂಡುಬರುವದಿಲ್ಲವೆಂಬುದು ನಿಜ. ಆದರೆ ಯುದ್ಧಗಳಲ್ಲಿಯೂ ಅನೇಕ ವಿಧಗಳುಂಟು. ಸಶಸ್ತ್ರ ಯುದ್ಧ ನಿಃಶಸ್ತ್ರ ಯುದ್ಧ ಎಂಬವೂ ಉಂಟು. ಆದರೆ ನಿಃಶಸ್ತ್ರ ಯುದ್ಧದ ಮಾತು ಬಿಟ್ಟು ಇಲ್ಲಿ ಸಶಸ್ತ್ರ ಯುದ್ಧಗಳ ವಿಚಾರ ಮಾಡಿದರೂ ಸಶಸ್ತ್ರ ಯುದ್ಧಗಳಲ್ಲಿ ಸಾರಿದ (ಡಿಕ್ಲೇರ್ಡ್) ಯುದ್ಧ ಸಾರದೆ ಇದ್ದ (ಅನ್ ಡಿಕ್ಲೇರ್ಡ್) ಯುದ್ಧ ಹೀಗೆ ಎರಡು ವಿಧಗಳಿರುವವು. ಈಗ ಹಿಂದುಸ್ತಾನ ಪಾಕಿಸ್ತಾನಗಳ ನಡುವೆ ಒಂದು ಬಗೆಯ ಸಾರದೆಯಿದ್ದ ಯುದ್ಧ ನಡೆದಿದೆ ಎಂದರೆ ಅದು ಕೇವಲ ಅಲಂಕಾರಿಕ ಭಾಷೆ ಎಂದು ಯಾರೂ ಅನ್ನಲಾರರು. ಹಿಂದುಸ್ತಾನದ ಮುಖ್ಯ ಪ್ರಧಾನರು ಹಾಗೂ ಪಾಕಿಸ್ತಾನದ ಮುಖ್ಯ ಪ್ರಧಾನರು ಇವರ ತೀರ ಈಚೆಗಿನ ಭಾಷಣಗಳ ಪೃಥಃಕರಣ ಮಾಡಿ ನೋಡಿದರೆ ಇದೇ ಮಾತು ಸಿದ್ಧವಾಗುವದು. ಈ ಸಾರದೆ ಇದ್ದ ಯುದ್ಧದಲ್ಲಿ ಪಾಕಿಸ್ತಾನದಲ್ಲಿಯ ಹಾಗೂ ಅದರಾಚೆಗಿನ ಗುಂಡರೇ ಆಕ್ರಾಮಕರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಹಾಗೆ ಇಲ್ಲದೆ ಹೋಗಿದ್ದರೆ ಆಧುನಿಕ ಶಸ್ತ್ರಾಸ್ತ್ರಗಳ ಸಹಿತ ನೂರಾರು ಟ್ರಕ್ಕುಗಳಲ್ಲಿ ತ.೦ಬಿ ಸುಮಾರು ೨೫೦ ಮೈಲುಗಳ ವರೆಗೆ ಜನರು ದಂಡೆತ್ತಿ ಬಂದು ಕಾಶ್ಮೀರ ಗಡಿಯಲ್ಲಿ ಸೇರಿ ಶ್ರೀನಗರದ ಹತ್ತಿರ ಬಂದು ತಲಪುವ ಬಗೆ ಯಾವುದು? ಇಂಥ ಪರಿಸ್ಥಿತಿಯಲ್ಲಿ ಕಾಶ್ಮೀರವು ಹಿಂದುಸ್ತಾನ ಸರಕಾರಕ್ಕೆ ಮೊರೆಹೊಕ್ಕು ಹಿಂದೀ ಒಕ್ಕೂಟ ಸೇರಿ ಸಂರಕ್ಷಣದ ಯಾಚನೆ ಮಾಡಿತು. ಆಗ ಹಿಂದುಸ್ತಾನವು ತನ್ನ ಸೈನ್ಯವನ್ನು ವಿಮಾನ ಮಾರ್ಗದಿಂದ ಕಳಿಸುವ ಪ್ರಸಂಗ ಬಂದಿತು. ಹಿಂದುಸ್ತಾನ ಸರಕಾರದವರು ಈ ಮೊದಲೇ ಕಾಶ್ಮೀರದ ಗಡಿಯ ವರೆಗೆ ಒಳ್ಳೇ ಸೈನಿಕ ಮಾರ್ಗವನ್ನು ಮಾಡಬೇಕಾಗಿತ್ತು ಎಂದು ಇಲ್ಲಿ ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂಥ ಮಾರ್ಗವಿರದ್ದಕ್ಕೆಯೆ ಸಾಕಷ್ಟು ಸೈನ್ಯವನ್ನು ಹಾಗು ಸಾಮಗ್ರಿಯನ್ನು ಸಕಾಲದಲ್ಲಿ ಕಳಿಸಲು ಅಸಾಧ್ಯವಾಗಿ ಕೇವಲ ವಿಮಾನಮಾರ್ಗದಿಂದಲೆ ಹೋಗಗೊಡುವಷ್ಟು ಸೈನ್ಯ ಹಾಗು ಸಾಮಗ್ರಿಯನ್ನು ಕಳಿಸಿ ಸಮಾಧಾನ ಪಡಬೇಕಾಯಿತು.

× + ×

ಸದ್ಯಕ್ಕಂತೂ ಜಗತ್ತಿನ ನಂದನವನವೆನಿಸಿದ ಸುಂದರವಾದ ಕಾಶ್ಮೀರ ಕೊಳ್ಳವು ರಕ್ತಸಿಂಚನದಿಂದ ಕಲಂಕಿತವಾಗತೊಡಗಿದೆ. ಇದರಲ್ಲಿ ಹಿಂದುಸ್ತಾನದ ಸೈನ್ಯವು ಗೆಲ್ಲುವುದೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ ಸಂದರ್ಭದ ಮೂಲಕ ಹಿಂದುಸ್ತಾನ ಪಾಕಿಸ್ತಾನಗಳ ನಡುವಿನ ಸಂಬಂಧಗಳಲ್ಲಿ ಬಹಳ ಬದಲಾವಣೆಯಾಗಿಬಿಟ್ಟದೆ ಎಂಬುದು ಸ್ಪಷ್ಟವಿದೆ. ಜುನಾಗಡದ ಸಮಸ್ಯೆ ಸಣ್ಣದಾಗಿ ಕಂಡರೂ ಆ ಸಂಗತಿಯೂ ಈ ಎರಡು ಹೊಸ ರಾಜ್ಯಗಳ ನಡುವಿನ ಸಂಬಂಧಗಳನ್ನು ಕೆಡಿಸಲಿಕ್ಕೆ ಸಾಕಷ್ಟು ಕಾರಣೀಭೂತವಾಗಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಈ ಸಂಬಂಧಗಳಲ್ಲಿ ಸುಧಾರಣೆಯಾಗದೆ ಹೋದರೆ ಒಂದಿಲ್ಲೊಂದು ದಿನ ಹಾಗು ಶೀಘ್ರವೆ ಎರಡೂ ರಾಜ್ಯಗಳ ಸೈನ್ಯಗಳು ಎದುರುಬದುರು ನಿಂತು ಹೋರಾಡುವ ದೃಶ್ಯವು ಎಲ್ಲರಿಗೂ ಕಂಡರೆ ಯಾರೂ ಆಶ್ಚರ್ಯಪಡುವ ಕಾರಣವಿಲ್ಲ.

× × ×

ಈ ಬಗೆಯ ಯುದ್ಧವು ನಡೆದರೆ ಅದು ಎರಡೂ ರಾಜ್ಯಗಳಿಗೆ ಘಾತಕ ಎಂಬುದು ಸ್ಪಷ್ಟ. ಇಷ್ಟೇ ಅಲ್ಲ; ಈ ಎರಡೂ ರಾಜ್ಯಗಳಲ್ಲಿ ಇನ್ನೂ ಕೋಟ್ಯಂತರ ಹಿಂದು ಮುಸಲ್ಮಾನರು ನೆರೆಹೊರೆಯವರಾಗಿ ವಾಸಿಸುತ್ತಿರುವರು. ಅವರ ಗತಿಯೇನು? ಅವರ ಪರಸ್ಪರ ಸಂಬಂಧಗಳು ಪೂರ್ವ ಪಶ್ಚಿಮ ಪಂಜಾಬಗಳಲ್ಲಿ ಇದ್ದಂತೆ ಆದರೆ ಎಲ್ಲೆಲ್ಲಿಯೂ ಪೂರ್ವ ಪಶ್ಚಿಮ ಪಂಜಾಬಗಳಲ್ಲಿಯ ದುರಂತ ದೃಶ್ಯವು ಕಾಣತೊಡಗುವದು. ಅದು ಪ್ರತ್ಯಕ್ಷ ಯುದ್ಧಕ್ಕಿಂತಲೂ ಭಯಕಾರಿಯು. ಇದೂ ಪಾಕಿಸ್ತಾನ ಹಿಂದುಸ್ತಾನ ಸರಕಾರಗಳಷ್ಟೇ ಅಲ್ಲ, ಪಾಕಿಸ್ತಾನ ಹಿಂದುಸ್ತಾನದ ಜನರು ಹೆಚ್ಚು ವಿಚಾರ ಮಾಡತಕ್ಕ ವಿಷಯವಾಗಿದೆ. ಪಾಕಿಸ್ತಾನದ ಪರಿಣಾಮವೇನಾಯಿತು, ಇನ್ನು ಮುಂದೇನಾಗಬಹುದು ಇವನ್ನು ಹಿಂದೂ ಮುಸಲ್ಮಾನರಿಬ್ಬರೂ ಪುನರ್ವಿಚಾರಿಸುವಂಥ ವಿಷಯವು. ಇಬ್ಬರೂ ನೂರಾರು ವರುಷ ನೆರೆಹೊರೆಯವರಾಗಿದ್ದವರು, ಈಗಲೂ ನೆರೆಹೊರೆಯವರಾಗಿಯೆ ಇರುವವರು, ಈ ರಾಜ್ಯಗಳುಕೂಡ ಒಂದೇ ರಾಷ್ಟ್ರಕೂಟದಲ್ಲಿದ್ದವುಗಳು (ಕಾಮನವೆಲ್ಥ) ಹೀಗೆಲ್ಲ ಇದ್ದು ನಿತ್ಯ ವೈರ, ನಿತ್ಯ ರಕ್ತಪಾತ, ನಿತ್ಯ ಯುದ್ಧಭಯ ಇವುಗಳಿಂದ ಜನರು ತ್ರಸ್ತರಾದರೆ ನಾವು ಯಾವಗತಿಗೆ ಮುಟ್ಟಬಲ್ಲೆವು? ಇದರ ವಿಚಾರವು ಈಗ ಅತ್ಯವಶ್ಯ.

### ಹೈದರಾಬಾದ

ಈ ಹೊತ್ತು ಕಾಶ್ಮೀರದಲ್ಲಿ ನಡೆದುದು ನಾಳೆ ಹೈದ್ರಾಬಾದದಲ್ಲಿ ಆಗಬಹುದೋ ಏನೋ ಎಂಬುವಷ್ಟು ಅಲ್ಲಿಯ ಪರಿಸ್ಥಿತಿಯು ಭಯಪ್ರದವಾಗತೊಡಗಿದೆ. ಅತ್ತ ಕಣ್ಣು ಮುಚ್ಚುವದೆಂದರೆ ಮೂರ್ಖತನವೇ ಸರಿ. ಅಲ್ಲಿ ಹೆಸರಿಗೆ ಆಲಾ ಹಜರತ್ ನಿಜಾಮಸಾಹೇಬರ ರಾಜ್ಯವಿದ್ದರೂ ಇತ್ತಿಹಾದ ಉಲ್ ಮುಸ್ಲಿಮಿನ್ ಎಂಬ ಜಾತೀಯ ಸಂಸ್ಥೆಯ ವರ್ಚಸ್ಸೇ ಹೆಚ್ಚಾಗಿಬಿಟ್ಟದೆಯೋ ಏನೋ ಎಂಬುವಂತೆ ಘಟನೆಗಳು ನಡೆದಿವೆ. ಅಲ್ಲಿಯ ರಾಜಕೀಯ ಆಂದೋಲನವು ಪರಮಾವಧಿಗೆ ಮುಟ್ಟಿ ಈಗ ಸುಮಾರು ೬—೭ ಸಾವಿರ ಜನರು ಕಾರಾಗೃಹದಲ್ಲಿ ಕೊಳೆಯುತಿದ್ದಾರೆ. ಆದರೆ ಆ ಮಾತನ್ನು ಒತ್ತಟ್ಟಿಗಿಟ್ಟು ಈಗ ಇತ್ತಿಹಾದ ಉಲ್ ಮುಸ್ಲಿಮಿನ ಸಂಸ್ಥೆಯವರು ಆ ಸಂಸ್ಥಾನದಲ್ಲಿಯ ೨೦ ಲಕ್ಷ ಮುಸಲ್ಮಾನರ ಭಯಸಾಕಿ ಹೈದ್ರಾಬಾದವನ್ನು ಸ್ವತಂತ್ರ ಇಡಲಿಕ್ಕೆ ಬೇಕೆಂದು ಹಟ ಹಿಡಿದಿರುವರು. ಉಳಿದ ೧೪೦ ಲಕ್ಷ ಜನರ ಗತಿ ಏನು? ಇದರ ವಿಚಾರ ಜನರೇ ಮಾಡಬೇಕು. ಯಾಕಂದರೆ ಅಲ್ಲಿಯ ಸರಕಾರದವರಂತೂ ಆ ವಿಚಾರ ಮಾಡಲು ಅಸಮರ್ಥರಿದ್ದಂತೆ ಕಾಣುವದು. ಆ ೧೪೦ ಲಕ್ಷ ಜನರ ಹಿತಸಂಬಂಧಗಳನ್ನು ಅನುಲಕ್ಷಿಸಿ ಹೈದರಾಬಾದ ಅಧಿಕಾರಿಗಳು ನಡೆದಿದ್ದರೆ ಈಗಾಗಲೆ ಹಿಂದೀ ಒಕ್ಕೂಟದಲ್ಲಿ ಅವರು ಸೇರಿ ಬಿಡುತ್ತಿದ್ದರು. ಹೀಗೆ ಪರಿಸ್ಥಿತಿ ಇದ್ದರೂ ಹೈದ್ರಾಬಾದದ ಜನರು ತಲೆ ಕಳಕೊಳ್ಳದೆ ತಮ್ಮ ಜನ್ಮಸಿದ್ಧ ಹಕ್ಕುಗಳಿಗಾಗಿ ಶಾಂತರೀತಿಯಿಂದ ಹೋರಾಡಿಯೆ ತೀರಬೇಕಾಗಿರುವದು ಹಾಗು ಅವರಿಗೆ ಎಲ್ಲರೂ ಸಹಾಯ ಮಾಡಲೇ ಬೇಕಾಗಿರುವದು.

x x x

ದುರ್ದೈವದಿಂದ ಹೈದ್ರಾಬಾದದಲ್ಲಿಯ ಜನರ ರಾಜಕೀಯ ಹೋರಾಟಕ್ಕೆ ಜಾತೀಯ ಸ್ವರೂಪ ಕೊಡುವದನ್ನು ಅಲ್ಲಿಯ ಇತ್ತಿಹಾದುಲ್ ಸಂಸ್ಥೆಯವರು ಪ್ರಯತ್ನ ಮಾಡುತ್ತಾರೆ. ಈ ರಾಜಕೀಯ ಹೋರಾಟವು ಹೈದ್ರಾಬಾದದಲ್ಲಿಯ ಎಲ್ಲ ಜಾತಿ ಪಂಥಗಳ ಸರ್ವಜನರ ಹಕ್ಕು ಬಾಧ್ಯತೆಗಳಿಗೆ ಇದೆ ಹೊರತು ಕೇವಲ ಹಿಂದುಗಳಿಗಾಗಿಯೆ ಇಲ್ಲ. ಇದನ್ನು ಆ ಸಂಸ್ಥೆಯವರು ಮರೆಮಾಡಬೇಕೆನ್ನುವರು ಹಾಗು ಮುಸಲ್ಮಾನರ ಹಕ್ಕು ಬಾಧ್ಯತೆಗಳ ಮೇಲೆ ಗದೆ ಬಂದಿದೆ ಎಂಬ ಹೂಲಿಯನ್ನೆಬ್ಬಿಸಿ ಮುಸಲ್ಮಾನರ ಸಂಘಟನೆ ಮಾಡುತ್ತಿರುವರು. ಆದುದರಿಂದ ಜಾತೀಯ ಗಲಭೆಗಳಿಗೆ ಆಸ್ಪದವಾಗಿಬಿಟ್ಟದೆ. ಹಿಂದುಗಳ ಮೇಲೆ ದಾಳಿಯಾದಾಗ ಅವರು ಸ್ವಸಂರಕ್ಷಣ ಮಾಡಿಕೊಳ್ಳದೆ ಗತ್ಯಂತರವಿಲ್ಲದಂಥ ಪರಿಸ್ಥಿತಿ ಅನೇಕ ಕಡೆಗೆ ಬರುತ್ತಿದೆ. ಇಂಥ ಒಂದು ಅತೀವಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಹೈದ್ರಾಬಾದದ ಜನತೆ ಈ ಹೊತ್ತು ಇದೆ. ಆದರೆ ಅವರು ಧೈರ್ಯಗೆಟ್ಟು ಕೈಕಾಲು ಬಿಟ್ಟು ನಡೆಯುವಂತಿಲ್ಲ. ಪ್ರಸಂಗ ಬಂದ ಬಳಿಕ ಅದನ್ನು ಎದುರಿಸುವುದರಿಂದಲೆ ನಾವು ಅದರೊಳಗಿಂದ ಪಾರಾಗಬಲ್ಲೆವು ಇಲ್ಲವೆ ಸತ್ತು ಹೋಗುವೆವು. ಆದುದರಿಂದ ಎಳ್ಳಷ್ಟು ಅಂಜದೆ ಹೆದರದೆ ತಮ್ಮ ಶಕ್ತಿ ಸರ್ವಸ್ವ ಎಂಬ ವಿಶ್ವಾಸದಿಂದ ಪ್ರತಿಯೊಬ್ಬ ಹೈದ್ರಾಬಾದ ನಿವಾಸಿಯು ಈ ಕಠಿಣ ಕಾಲದಲ್ಲಿ ನಡಕೊಳ್ಳಲಿಕ್ಕೆ ಬೇಕು. ಈ ಸ್ವಾವಲಂಬನ ವೃತ್ತಿಯಿಂದಲೆ ಅವರಿಗೆ ಯಶಸ್ಸು ಸಿಗಬಲ್ಲದು ಹಾಗು ಯೋಗ್ಯ ಕಾಲದಲ್ಲಿ ಸಹಾಯವೂ ದೊರೆಯುವದು.

### ದಕ್ಷಿಣ ಸಂಸ್ಥಾನಗಳ ಒಕ್ಕೂಟ

ಪೂರ್ಣ ಜವಾಬದಾರ ರಾಜ್ಯಪದ್ಧತಿಯನ್ನು ಪ್ರಜೆಗಳಿಗೆ ಒಪ್ಪಿಸಿ ಬಿಡುವ ಶರತಿನ ಮೇಲೆ ತಮ್ಮ ಸಂಸ್ಥಾನಗಳ ಗಡಿಗಳನ್ನೆಲ್ಲ ಅಳಿಸಿಬಿಡುವ ಕರಾರಿನ ಮೇಲೆ, ಕನ್ನಡ ಮರಾಠಿ ಭಾಗದ ಜನರ ಇಚ್ಛೆಯಂತೆ ಅವರು ನೆರೆಯ ಭಾಷಾನುಗುಣ ಪ್ರಾಂತಗಳಲ್ಲಿ ಲೀನವಾಗಲು ಮುಕ್ತರಿರಬೇಕೆಂಬ ಒಪ್ಪಿಗೆಯ ಮೇಲೆ ಈಗ ೮ ಸಂಸ್ಥಾನಗಳ ರಾಜರು ಮಾಡಿದ ಒಕ್ಕೂಟಕ್ಕೆ ಮೂರ್ತಸ್ವರೂಪವು ಬರತೊಡಗಿದೆ. ರಾಜಪ್ರಮುಖನೊಬ್ಬನೆ ಸನದೀ ರಾಜನಾಗಿ (ಕಾನ್‌ಸ್ಟಿಟ್ಯೂಶನಲ್ ಹೆಡ್) ಕೆಲಸ ಮಾಡಬೇಕು. ಉಳಿದವರು ಆ ಅವಧಿಯಲ್ಲಿ ಇಸ್ಟೇಟಿನ ರಾಜರಿರಬೇಕು ಎಂಬುದೂ ಒಂದು ಆ ಕರಾರುಗಳಲ್ಲಿದೆ. ಇರಲಿ. ಈ ಎಂಟು ಸಂಸ್ಥಾನಗಳಲ್ಲಿ ಇನ್ನೂ ಜಮಖಂಡಿ, ಮುಧೋಳ, ಸವಣೂರ ಸೊಂಡೂರ ಈ ಪೂರ್ಣ ಕನ್ನಡ ಸಂಸ್ಥಾನಗಳು ಕೂಡದೆ ಇದ್ದುದು ವಿಷಾದದ ಸಂಗತಿ. ಕೊಲ್ಹಾಪುರ ಮುಂತಾದ ಪ್ರತಿಗಾಮಿ ಧೋರಣದ ಸಂಸ್ಥಾನಗಳು ಇದರ ಕೂಡದೆ ಇದ್ದುದು ಆಶ್ಚರ್ಯದ ಸಂಗತಿಯಲ್ಲ. ಆದರೆ ಸಂಸ್ಥಾನಗಳ ಕ್ಷೇತ್ರದಲ್ಲಿ ಇದೊಂದು ದೊಡ್ಡ, ಮಹತ್ವದ, ಹಾಗೂ ಪ್ರಗತಿಪರವಾದ ಪ್ರಯೋಗವಿರುವದೆಂದು ಹೇಳಬಹುದು. ಈ ಪ್ರಯೋಗಕ್ಕೆ ಅಖಿಲ ಭಾರತೀಯ ಸಂಸ್ಥಾನೀ ಪ್ರಜಾಪರಿಷತ್ತಿನವರು ಹಾಗೂ ಶ್ರೀ ಕೃಪಲಾನಿ ಮುಂತಾದ ಕಾಂಗ್ರೆಸ್ ಮುಖಂಡರೂ ಬೆಂಬಲ ಕೊಟ್ಟಿದ್ದಾರೆ. ಇನ್ನು ಹಲವೇ ದಿನಗಳಲ್ಲಿ ಈ ಒಕ್ಕೂಟದ ಘಟನಾಸಮಿತಿ ಸ್ಥಾಪನವಾಗಿ ಲೋಕನಿಯುಕ್ತವಾದ ನಡುಗಾಲ ಸರಕಾರವು ಸ್ಥಾಪನವಾಗುವದಿದೆ. ಆಗ ಜನಪ್ರತಿನಿಧಿಗಳ ಕೈಯಲ್ಲಿ ಕಾರ್ಯಾಧಿಕಾರವು ಬರುವದು. ಆ ಘಟನಾಸಮಿತಿಯವರು ಒಂದು ಯೋಗ್ಯ ಘಟನೆಯನ್ನು ಸಿದ್ಧಪಡಿಸಿದರೆ ಎಲ್ಲ ಸರಿಹೋಗುವದೆಂದು ... ಮಾಡಲು ಆಸ್ಪದವಿರುವದು. ಆದುದರಿಂದ ಯೋಗ್ಯ ಘಟನೆ ಮಾಡಲು ಯತ್ನಿಸುವದು ಅವಶ್ಯ.

### ಮಹಾಕರ್ನಾಟಕ ನಿರ್ಮಾಣ

ಮೈಸೂರ ಪೂರ್ಣ ಜವಾಬದಾರ ರಾಜ್ಯಪದ್ಧತಿಯ ಹೋರಾಟದಲ್ಲಿ ... ಹೊಸ ಪರ್ವ ಕರ್ನಾಟಕದಲ್ಲಿ ... ತಮ್ಮ ಅಧಿಕಾರಗಳನ್ನು ... ಶ್ರೀ ಮಹಾರಾಜರು ಮೈಸೂರು ಘಟನಾಸಮಿತಿಗೆ ಒಪ್ಪಿಸಿದ್ದು ಬಹಳ ಭೂಷಣಾಸ್ಪದವು. ಈ ಮೂಲಕ ಮೈಸೂರಿನವರಿಗೆ ... ಕರ್ನಾಟಕ ಪ್ರಾಂತನಿರ್ಮಿಸಿಬಿಡುವ ಪ್ರಯತ್ನಕ್ಕೆ ಈಗ ಹೊಸ ಹುರುಪು ಉಂಟಾಗಿದೆ. ಈ ಸಂದರ್ಭದಲ್ಲಿ ಮೈಸೂರು ಮಹಾರಾಜರು ಮೈಸೂರು ಮಂತ್ರಿಮಂಡಲದವರು ಹಾಗು ಘಟನಾಸಮಿತಿಯವರು ... ದಿಂದ ನಡೆದುಕೊಂಡು ... ಹಾಗೂ ಅಖಂಡ ಕರ್ನಾಟಕ ಪ್ರಾಂತ ನಿರ್ಮಾಣದ ... ಸಕ್ರಿಯ ಬೆಂಬಲಕೊಟ್ಟು ಶೀಘ್ರದಲ್ಲಿಯೆ ಅದು ನೆರವೇರುವಂತೆ ಮಾಡುವರೆಂದು ನಾವೆಲ್ಲರೂ ಆಸೆಪಡಲು ಅಡ್ಡಿ ಇಲ್ಲ. ಯೂನಿಯನ್ ಕರ್ನಾಟಕದವರು ಈ ಮಾತಿಗೆ ಒಪ್ಪಿದರೆ ಅವರಿಗೆ ಅನೇಕಾನೇಕ ಲಾಭಗಳಿವೆ ಎಂಬುದನ್ನು ಪ್ರತ್ಯೇಕವಾಗಿ ಹೇಳಲವಶ್ಯವಿಲ್ಲ. ಯೂನಿಯನ್ನ ಸರಕಾರದವರು ಸಹ ಇಂಥ ಪ್ರಾಂತ ನಿರ್ಮಾಣಕ್ಕೆ ಯಾವ ಅಡ್ಡಿಯನ್ನೂ ಒಡ್ಡುವ ಕಾರಣವಿಲ್ಲ. ಇನ್ನು ಘಟನಾತ್ಮಕ ದೃಷ್ಟಿಯಿಂದ ಇದನ್ನು ಹೇಗೆ ಕೈಗೂಡಿಸಬೇಕು ಎಂಬುದನ್ನು ವಿಚಾರಿಸಿ ಕನ್ನಡಿಗರ ಈ ಕನಸಿಗೆ ಒಂದು ಮೂರ್ತಸ್ವರೂಪವನ್ನು ಕೊಡಲು ಈ ಆಯಕಟ್ಟಿನ ಪ್ರಸಂಗದಲ್ಲಿ ಕರ್ನಾಟಕದ ಮುಖಂಡರೆಲ್ಲರೂ ಪ್ರಯತ್ನಿಸುವರೆಂದು ನಂಬಿದ್ದೇನೆ.

Reg. No. B. 3148

LICENCE No. 3
Licenced to Post without Prepayment

KARMVEER 10-11-47

ಭವಿಷ್ಯ

ಸ್ವತ್ವಾಧಿಕಾರಿ:— ಕೃಷ್ಣಶಾಸ್ತ್ರಿ ಘಳೆ, ಭವಿಷ್ಯ ಕಥನ ಆಫೀಸ ಖಡೇಬಜಾರ ಬೆಳಗಾವಿ

# ನವಂಬರ ೧ ರಿಂದ ೧೬ ರ ವರೆಗೆ

## ಮೇಷ

ಸ್ವತಃ ನಿಮಗೂ ನಿಮ್ಮ ಮನೆಯಲ್ಲಿಯ ಬಹುತರ ಜನರಿಗೂ ಆರೋಗ್ಯಭಾಗ್ಯ ಕಡಮೆ. ಎಲ್ಲ ವಿಷಯುಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ; ಆಪ್ತರಿಂದ ಮನಸ್ಸಿನವಿರುದ್ಧ ಕೆಲ ಸಂಗತಿಗಳನ್ನು ಮಾಡಲು ದುರಾಗ್ರಹ ಮತ್ತು ಕೃಚಿತ ಹೆದರಿಕೆ. ಸ್ಥಾವರದಲ್ಲಿ ಬಹಳ ಹಾನಿ. ಉದ್ಯೋಗದಲ್ಲಿ ಎಲ್ಲ ಬಗೆಯ ಪ್ರಯತ್ನ ನಿರರ್ಥಕವಾಗುವ ಸರತಿ. ಕೆಲವೊಂದು ಸರಕಾರಿ ಪೇಚು ಬರುವ ಪ್ರಸಂಗ. ವಾದದಲ್ಲಿ ಸ್ಪರ್ಧೆಯಲ್ಲಿ ಅನುಕೂಲತೆ. ಬಂಧುವರ್ಗದವರು ಮತ್ತು ಜನರು ಧೈರ್ಯದಿಂದ ವರ್ತಿಸುವದು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಅಶ್ವಿನಿಯು ೪ ನೆ ಮತ್ತು ಭರಣಿಯು ಮೊದಲನೆ ೩ ಚರಣಗಳಿಗೆ ಬಹಳ ತೊಂದರೆ. ತಾ. ೧೧, ೧೩, ೧೬ ಅನುಕೂಲ.

## ವೃಷಭ

ಹೆಂಡತಿಗಿಂತ ನಿಮ್ಮ ಪ್ರಕೃತಿ ಹೆಚ್ಚು ಅನುಕೂಲ. ಜನರಿಂದ ಲೋಕಾಪವಾದಿತ ಕೃತ್ಯಗಳು ಪ್ರಾಪಂಚಿಕ ಎಲ್ಲ ವಿಷಯುಗಳಲ್ಲಿ ವಿಪರೀತ ತೊಂದರೆ. ಸತ್ಯವನ್ನು ಮಾತಾಡಿದರೂ ಸರಳವಾಗಿ ವರ್ತಿಸಿದರೂ ಜನರ ಮನಸ್ಸು ಸಂಶಯಿತ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ ಆದರೆ ಅಪ್ರತಿಷ್ಠೆಯಾಗುವ ಅಂಜಿಕೆ. ಮಿತ್ರಸುಖ ಉತ್ತಮ. ಬಂಧುವರ್ಗದವರಲ್ಲಿ ನಿಕಟವರ್ತಿಯ ಆಪ್ತರಲ್ಲಿ ಕೆಲ ಜನರಿಗೆ ಶಾರೀರ ಕ್ಲೇಶ. ಸ್ಥಾವರದಲ್ಲಿ ಹಾನಿ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಪ್ರವಾಸಾದಿ ಕೆಲಸ ಅತಿ ತೊಂದರೆಯದು. ಕೃತ್ತಿಕೆಯ ೨ ಮತ್ತು ೪ ಹಾಗು ರೋಹಿಣಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೦, ೧೪, ೧೪, ೧೫ ಅನುಕುಲ.

## ಮಿಥುನ

ನಿಮ್ಮ ಪ್ರಕೃತಿ ಅನುಕೂಲ ಆದರೆ, ಹೆಂಡತಿಗೆ ಹೆಚ್ಚು ಕಾಯಿಲೆ ಅಲ್ಲದೆ ಅವಳ ಸಹಿತ ಮನೆಯಲ್ಲಿ ಎಲ್ಲರೊಡನೆ ತೀವ್ರಮತಭೇದ. ಪ್ರಾಪಂಚಿಕ ಸುಖ ದುಃಖಗಳ ಬಗ್ಗೆ ನಿಷ್ಕಾಳಜಿತನ.ಬಹಳ ಕುತರ್ಕ ಮತ್ತು ಅಶ್ವನಾಶದ ವಿಚಾರ ಉದ್ಯೋಗದಲ್ಲಿ ಕಠಿನ ಪರಿಸ್ಥಿತಿ ಉಳಿದು ಪ್ರತಿಗಳಿಗೆಗೊಮ್ಮೆ ಹೆಚ್ಚೆಚ್ಚು ಸಂಕಟಗಳು. ಮಿತ್ರನಾಶ ಇಲ್ಲವೆ ಅವರೊಡನೆ ಬದ್ಧವೈರ ಸ್ತ್ರೀವರ್ಗದಲ್ಲಿ ಬಹಳ ಅನಾದರ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರ ವ್ಯವಹಾರ ಅನುಕೂಲ. ಆದರೆ ಮೃಗಾದ ೪ ನೇ ಮತ್ತು ಆರಿದ್ರದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೧, ೧೩, ೧೬ ಅನುಕೂಲ.

## ಕರ್ಕ

ಸ್ವತಃಕ್ಕೆ ಮತ್ತು ಹೆಂಡತಿಗೆ ಬಹಳ ಕಾಯಿಲೆ ಮಕ್ಕಳು ಮರಿಗಳಿಗೆ ಅಪಘಾತದ ಕ್ಲೇಶಭಯ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಸ್ವಲ್ಪ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ತುಂಬ.ಆದರೆ ಪ್ರತಿಷ್ಠೆಯು ಮುರುಕು ಕಾಜಿನಂತೆ. ಮಿತ್ರ ಸುಖ ಅನುಕೂಲ. ಸ್ಥಾವರದಲ್ಲಿ ಸ್ವಲ್ಪ ಅನುಕೂಲ ಘಟನೆಗಳು.ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ನ್ಯಾಯಕರ್ತರದೆ ನಿಮ್ಮ ವಿರುದ್ಧ ಪಕ್ಷಪಾತ.ಪ್ರವಾಸ ಮತ್ತು ಪತ್ರ ವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಪುಷ್ಯದ ೪ ನೇ ಮತ್ತು ಅಶ್ಲೇಷಾದ ಮೊದಲನೆ ೩ ಚರಣಗಳಿಗೆ ಹೆಚ್ಚು ತೊಂದರೆ.ತಾ. ೧೦, ೧೪, ೧೫ ಅನುಕೂಲ

## ಸಿಂಹ

ಪ್ರಕೃತಿ ನಿಮ್ಮದು ಅನುಕೂಲ ಆದರೆ ಹೆಂಡತಿಗೆ ಕ್ಲೇಶ. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಮನಸ್ಸಿನಂತೆ ಉದ್ಯೋಗದಲ್ಲಿ ಪ್ರಗತಿ ಬಹಳ ಮಂದ. ಪ್ರತಿಷ್ಠೆ ಸಾಮಾನ್ಯ ಆದರೆ ಲಾಭ ಉತ್ತಮ. ಆದರೂ ಮುಳುಗುವ ವೆಚ್ಚ ಬಹಳ. ಕಿಸೆಯೊಳಗಿನ ಹಣ ವೆಚ್ಚಮಾಡಿ ತಿನ್ನುವ ವ್ಯವಹಾರ ಮಾಡುವ ಮೋಹ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಸ್ವತಃದ ಮೇಲೆ ಸರಕಾರೀ ಪೇಚು ಬರುವ ಸಂಭವ. ಪ್ರವಾಸ ಅತಿ ತೊಂದರೆಯದು ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ತಾ. ೧೦, ೧೧, ೧೩ ಅನುಕೂಲ.

## ಕನ್ಯಾ

ಎಲ್ಲರಪ್ರಕೃತಿ ಉತ್ತಮಆದರೆ ನಿಮ್ಮ ನಿಮ್ಮಲ್ಲಿ ಮತಭೇದದ ರಸಕಸಿ ಹೆಚ್ಚುತ್ತಿರುವದರಿಂದ ಪ್ರಾಪಂಚಿಕ ಸುಖದಲ್ಲಿ ವಿರಸ. ಉದ್ಯೋಗದಲ್ಲಿ ಪ್ರಗತಿಪ್ರತಿಷ್ಠೆ ಮತ್ತುಲಾಭವೂಬಹಳ ಉತ್ತಮ. ಮಕ್ಕಳಲ್ಲಿ ಬಹಳ ಪ್ರಗತಿ ಆದರೆ ಅವರ ವರ್ತನೆ ಅಷ್ಟೇ ಒಪ್ಪಿಗೆ ಇಲ್ಲದ್ದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಮತ್ತು ಶತ್ರುಗಳಲ್ಲಿ ಒಡಕು ಬೀಳುವದರಿಂದ ಬಹಳ ಸಂಗತಿಗಳು ಅನಾಯಾಸವಾಗಿ ಅನುಕೂಲ. ಮಿತ್ರರಲ್ಲಿ ಕ್ಲೇಶ. ಪ್ರವಾಸಾದಿ ಕೆಲಸ ಅತಿ ಹಿತದ್ದು. ಉತ್ತರಾದ ೨ ಮತ್ತು ೪ ಹಾಗು ಹಸ್ತಾದ ಮೊದಲನೆ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೦, ೧೧ ೧೩, ೧೪ ಅನುಕೂಲ.

## ತುಲಾ

ಹೆಂಡತಿಗೆ ಬಹಳ ಕ್ಲೇಶ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ.ಪ್ರಿಯಜನರ ಸಹವಾಸ. ವಿದ್ಯೆಗಿಂತ ವ್ಯವಹಾರಿಕ ಬುದ್ಧಿಯ ತೇಜಸ್ಸೇ ಹೆಚ್ಚು ಬೀಳುವ ಪ್ರಸಂಗ. ಉದ್ಯೋಗದಲ್ಲಿ ಬಹಳ ಪ್ರಗತಿ ಮತ್ತು ತುಂಬ ಲಾಭ ಆದರೆ ಸಣ್ಣ ಬಾಯಿಯಲ್ಲಿ ದೊಡ್ಡ ತುತ್ತು ಹಾಕಿಕೊಳ್ಳುವದರಿಂದ ಪ್ರತಿಷ್ಠೆ ಅಕ್ಷರಶಃ ಹಾರಿ ಹೋಗುವ ಅಂಜಿಕೆ. ಮಿತ್ರರಲ್ಲಿ ಒಬ್ಬನು ನೀಚ ಕೃತ್ಯವನ್ನು ಮಾಡುವದರಿಂದ ನಿಮ್ಮದೂ ಮಾನಖಂಡನೆಯಾಗುವ ಅಂಜಿಕೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಪಕ್ಷದವರದೇ ಹೆಚ್ಚು ಜೋರು. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಚಿತ್ರಾದ ೪ ನೆ ಮತ್ತು ಸ್ವಾತಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೧, ೧೩, ೧೪, ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಮಧ್ಯಮ ಆದರೆ ಮಕ್ಕಳಲ್ಲಿ ಬಹಳ ಉನ್ನತಿ;ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಸಾಮಾನ್ಯವೆನಿಸಿದರೂಮುಂದೆಶುಭೋದಯವಾಗುವ ಘಟನೆಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಮಿತ್ರರಿಗಾಗಿ ವಿಪರೀತ ವೆಚ್ಚ.ಪ್ರವಾಸ ಅನುಕೂಲ ಆದರೆ ಭೆಟ್ಟಿ ಮತ್ತು ಪತ್ರ ವ್ಯವಹಾರ ತೊಂದರೆಯದು. ಅನುರಾಧೆಯ ೪ ನೇ ಮತ್ತು ಜ್ಯೇಷ್ಠದ ಮೊದಲನೆ ೩ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೦, ೧೪, ೧೫, ಅನುಕೂಲ.

## ಧನು

ಪ್ರಕೃತಿಗೆ ಬಹಳ ಕ್ಲೇಶ ಮತ್ತು ಮನೆಯಲ್ಲಿ ಒಂದೇ ಸವನೆ ಬಡಿದಾಟ. ಮಕ್ಕಳಿಂದ ಅನಿವಾರ್ಯ ಕೃತ್ಯಗಳು ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಉತ್ತಮ ಆದರೆ ನಿರರ್ಥಕವೆಚ್ಚವೂ ಜೋರಿನಿಂದ ಆಗುವ ಪ್ರಸಂಗ. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ ಗುಪ್ತಧನಪ್ರಾಪ್ತಿಗಾಗಿ ಮಾಡಿದ ಪ್ರಯತ್ನದಲ್ಲಿ ಹಾನಿ ಮತ್ತು ಫಜೀತಿ ಪ್ರವಾಸಾದಿ ಕೆಲಸ ಹಿತಕರ ಮೂಲಾದ ೪ ನೇ ಮತ್ತು ಪೂರ್ವಾಷಾಢದ ಮೊದಲನೆ ೩ ಚರಣಗಳಿಗೆ ಹೆಚ್ಚು ತೊಂದರೆ. ತಾ ೧೦-೧೧-೧೩ ಅನುಕೂಲ.

## ಮಕರ

ಪ್ರಕೃತಿಗೆ ಅಪಘಾತದಿಂದ ಕ್ಲೇಶಭಯ. ಹೆಂಡತಿಕೂಡ ಮೇಲಿಂದಮೇಲೆ ವಿರೋಧ ಮತ್ತು ಮಕ್ಕಳಿಂದ ನಿಂದ್ಯ ಕೃತ್ಯಗಳು. ಎಲ್ಲ ವಿಷಯುಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚು. ಉದ್ಯೋಗದಲ್ಲಿ ಹೆಚ್ಚು ಪ್ರಗತಿ ಮತ್ತು ಪ್ರತಿಷ್ಠೆ ಮತ್ತು ತುಂಬಾ ಲಾಭ. ದೊಡ್ಡವರ ಭೆಟ್ಟಿ ಸಂದರ್ಶನ ಮತ್ತು ಅನುಗ್ರಹದ ಯೋಗ. ಮಿತ್ರಸುಖ ಅನುಕೂಲ. ಆದರೆ ಅವರಲ್ಲಿ ಕೆಲ ಜನರಿಗೆ ಅಪಘಾತ ಇಲ್ಲವೆ ರಾಜಭಯ. ವಾದದಲ್ಲಿ ಮತ್ತು ಸ್ಪರ್ದೆಯಲ್ಲಿ ಯಶಸ್ಸು. ಪ್ರವಾಸಾದಿ ಕೆಲಸ ಸುಖಕರ. ಉತ್ತರಾಷಾಢಾದ ೨ ಮತ್ತು ಶ್ರವಣಾದ ಮೊದಲನೆ ೩ ಚರಣಗಳಿಗೆ ಹೆಚ್ಚು ತೊಂದರೆ ೧೦—೧೧—೧೩—೧೪ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣ. ಬಂಧುವರ್ಗದವರೊಡನೆ ತೀವ್ರ ವಿರೋಧದ ಪ್ರಸಂಗಗಳು. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ ಉದ್ಯೋಗದಲ್ಲಿ ಪ್ರಗತಿ. ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮಿತ್ರತ್ವದಲ್ಲಿ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ಹಾಗು ಶತ್ರುನಾಶಕ್ಕಾಗಿ ಯೋಜಿಸಿದ ಅಪಮಾರ್ಗದ ಬಗ್ಗೆ ಜನರಲ್ಲಿ ದೊಡ್ಡ ಗೊಂದಲ ಮತ್ತು ಸ್ವತಃದ ಭಯಂಕರ ತಿರಸ್ಕಾರ.ಪ್ರವಾಸಾದಿ ಕೆಲಸಹಿತದ್ದು. ಧನಿಷ್ಠೆಯು ೪ ನೆ ಮತ್ತು ಶತತಾರಿಕೆಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ, ತಾ. ೧೧-೧೩-೧೬-೧೪ ಅನುಕೂಲ.

## ಮೀನ

ಪ್ರಕೃತಿ ಉತ್ತಮ. ಪ್ರಾಪಂಚಿಕ ಸುಖ ಸಾಮಾನ್ಯ. ಹೆಂಡತಿ ಮತ್ತು ಮಕ್ಕಳಿಂದ ಒಪ್ಪಿಗೆಯಿಲ್ಲದ ಕೃತ್ಯಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವಿರೋಧ. ಸ್ವಲ್ಪ ಅವಚಿತ ಧನಲಾಭ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ. ಉತ್ತರಾಭಾದ್ರಪದದ ೪ ನೆ ಮತ್ತು ರೇವತಿಯ ಮೊದಲನೆ ೩ ಚರಣಗಳಿಗೆ ತೊಂದರೆಯಿಲ್ಲದೆ ಯಶಸ್ಸು. ತಾ. ೧೦, ೧೪, ೧೫ [illegible]

# ಪಾಕಿಸ್ತಾನದ ಚಿಂತಾಜನಕ ಆರ್ಥಿಕ ಪರಿಸ್ಥಿತಿ

ಪಂಜಾಬದ ಜನಸಮುದಾಯವು ಮುಂದು ಗಾಣದೆ ದಿಕ್ಕೆಟ್ಟು ಚದುರಿ ಹೋಗುತ್ತಿರುವದರ ಪರಿಣಾಮವಾಗಿ ಸಿಂಧ ಮತ್ತು ಪಂಜಾಬಗಳಲ್ಲಿ ಆರ್ಥಿಕ ಅರಾಜಕತೆ ಉಂಟಾಗಿಹೋಗಿದೆ. ಇದರಿಂದ ವ್ಯಾಪಾರ ವ್ಯವಹಾರ ಉದ್ದಿಮೆಗಳಿಗೆ ದೊಡ್ಡ ಆಘಾತವಾಗಿದೆ. ಮಹಾಯುದ್ಧಾನಂತರ ಮಾತ್ರ ಇಂತಹ ಆರ್ಥಿಕ ಅನಾಹುತಗಳು ಸಂಭವಿಸುವದುಂಟು. ಮುಸಲ್ಮಾನೇತರ ನಿರ್ಗಮನದಿಂದಲೇ ಪಾಕಿಸ್ತಾನಕ್ಕೆ ಈ ಆರ್ಥಿಕ ವಿಪತ್ತು ಒದಗಿದೆಯೆಂಬುದಾಗಿ ಎಲ್ಲ ವರದಿಗಳಿಂದೂ ತಿಳಿದುಬರುವ ಒಂದು ದೊಡ್ಡ ಅಂಶ. ತಮ್ಮ ಈ ನಿರ್ಗಮನಕ್ಕೆ, ಆನುವಂಶಿಕವಾಗಿ ನೆಲಸಿದ ಮನೆಮಾರು ಎಲ್ಲ ತೊರೆದು ಹೊರಹೊರಡುವದಕ್ಕೆ, ಆಳವಾದ ಕಾರಣವಿಲ್ಲದಿಲ್ಲ ಎಂಬುದಾಗಿ ಮುಸಲ್ಮಾನೇತರರು ಹೇಳುತ್ತಾರೆ. ಅವರ ಅಸ್ತಿತ್ವಕ್ಕೇ ಅರೆದಾಳ ತೊಡೆಯಬಂದ ಹೊಸ ಪರಿಸ್ಥಿತಿಯ ಇರುಕಿನಿಂದ ತಪ್ಪಿಸಿಕೊಂಡು ಅವರು ಓಡಿ ಹೋಗುತ್ತಿದ್ದಾರೆ. ಸಿಂಧ ಶಾಸನ ಸಭೆಯ ಸದಸ್ಯರಾದ ಪ್ರೊ. ಎನ್. ಆರ್. ಮಲ್ಕಾಣಿ ಎಂಬವರು ಈ ಬಗ್ಗೆ ಹೀಗೆ ಉಸುರಿದ್ದಾರೆ:— "ಪಾಕಿಸ್ತಾನದಲ್ಲಿ ಇನ್ನು ಮುಂದೆ ತಮಗೆ ಆರ್ಥಿಕ ಭವಿತವ್ಯವೇ ಇಲ್ಲವೆಂದೂ ವ್ಯಾಪಾರದಲ್ಲಿ ದೊಡ್ಡ ಉದ್ಯೋಗಗಳಲ್ಲಿ ದಿವಾಣಿ ಅಥವಾ ದಂಡಿನ ನೌಕರಿಗಳಲ್ಲಿ ತಮಗೆ ಸಲ್ಲತಕ್ಕ ಸ್ಥಾನಮಾನಗಳಿಂದ ತಾವು ವಂಚಿತರೆಂದೂ ಇಷ್ಟರಲ್ಲಿ ಹಿಂದುಗಳೆಲ್ಲರ ಮನವರಿಕೆಯಾಗಿ ಹೋಗಿದೆ" ಹೀಗಿದ್ದ ಪಕ್ಷಕ್ಕೆ ಇದು ನಿಜವಾಗಿಯೂ ಶೋಚನೀಯ. ಯಾಕೆಂದರೆ, ಸರಿಯೋ ತಪ್ಪೋ ಅಂತೂ ಈ ವರೆಗೆ ಹಿಂದುಗಳೇ ತಮ್ಮ ಬುದ್ಧಿಯ ಬಲದಿಂದ, ತಮ್ಮ ಸಾಹಸದಿಂದ ತಮ್ಮ ಅಮಿತ ಉತ್ಸಾಹದಿಂದ ಈ ಎಲ್ಲ ವಿಭಾಗಗಳಲ್ಲಿಯೂ ಮುಂದಾಗಿದ್ದರು. ಈ ನಿರ್ಗಮನಕ್ಕೆ ಅದೇನೇ ಕಾರಣವಿದ್ದರೂ ಇದರ ಫಲಮಾತ್ರ ಪಾಕಿಸ್ತಾನಕ್ಕೆ ತೀರ ಕಹಿಯಾಗಿದೆ. ಪಾಕಿಸ್ತಾನದ ಈ ಅಲ್ಪಸಂಖ್ಯಾಕರೇ ದೊಡ್ಡ ದೊಡ್ಡ ಕಾರಖಾನೆಗಳ ಮತ್ತು ವ್ಯವಹಾರಗಳ ಯಜಮಾನರಾಗಿ, ವ್ಯವಸ್ಥಾಪಕರಾಗಿ, ಸಂಚಾಲಕರಾಗಿ ಮತ್ತು ಸಂಯೋಜಕರಾಗಿ ಪ್ರಮುಖ ಪಾತ್ರವಹಿಸುತ್ತ ಬಂದಿದ್ದಾರೆ. ಇವರ ನಿರ್ಗಮನದಿಂದ ಈ ಆರ್ಥಿಕ ವ್ಯವಹಾರವೇ ಕಟ್ಟಾದುದರಲ್ಲಿ ಆಶ್ಚರ್ಯವೇನು? ವಿಶೇಷವಾಗಿ ಲಾಹೋರದಲ್ಲಿ, ಪಶ್ಚಿಮ ಪಂಜಾಬದಲ್ಲಿ ಸಾಮಾನ್ಯವಾಗಿ ಹಿಂದುಗಳೇ ವಾಣಿಜ್ಯ ವ್ಯಾಪಾರಗಳ, ಬ್ಯಾಂಕುಗಳ, ವಿಮಾವ್ಯವಹಾರಗಳ ಯಂತ್ರಗಳನ್ನು ಸುಗಮವಾಗಿ ಸಾಗಿಸಿಕೊಂಡಿದ್ದರು. ಅಂತೂ ಮುಸಲ್ಮಾನೇತರರ ನಿರ್ಗಮನ ಮೂಲಕವಾಗಿ ಪಾಕಿಸ್ತಾನದ ಆರ್ಥಿಕ ಪರಿಸ್ಥಿತಿ ತೀರ ಚಿಂತಾಜನಕ ಸ್ಥಿತಿಗೆ ಬಂದಿದೆ.

ಈ ಅನಾಹುತಗಳು ಸಂಭವಿಸಿದಂದಿನಿಂದ ಲಾಹೋರ ಒಂದರಲ್ಲಿಯೇ ಬ್ಯಾಂಕುಗಳಿಗೆ ಲಕ್ಷಾವಧಿ ರೂಪಾಯಿಗಳ ಹಾನಿ ತಟ್ಟಿದೆ; ಓರ್ವ ಪರಿಷ್ಠಾಧಿಕಾರಿಯ ಮಾತುಗಳಲ್ಲಿ ಹೇಳಬೇಕಾದರೆ "ಲಾಹೋರ ಬ್ಯಾಂಕುಗಳು ಇಂದು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳನ್ನು ಯಾವ ಬ್ಯಾಂಕುಗಳೂ ಎದುರಿಸಲಾರವು. ಇಷ್ಟೇ ಅಲ್ಲ ಯಾವ ದೇಶದ ಬ್ಯಾಂಕ ವ್ಯವಹಾರದ ಇತಿಹಾಸದಲ್ಲಿಯೂ ಇಂಥ ಉದಾಹರಣೆ ಸಿಕ್ಕದು. ಮುಲಗಿಯೋಳುವದರೊಳಗೆ ಬ್ಯಾಂಕ ವ್ಯವಹಾರದ ರಹಸ್ಯವನ್ನು ಕಲಿಯಲಾದೀತೆ? ಅಲ್ಲದೆ ಹೊಸದಾಗಿ ನಿಯುಕ್ತರಾದ ಕೆಲಸಗಾರರು ಈ ವಿಷಯದಲ್ಲಿ ನಿಷ್ಣಾತರಾಗಿರುವಂತೆಯೂ ಕಂಡುಬರುವದಿಲ್ಲ." ಆದ್ದರಿಂದ ಪ್ರಕ್ಷುಬ್ಧ ಪಾಕಿಸ್ತಾನದ ವಿಭಾಗಗಳಲ್ಲಿದ್ದ ಬ್ಯಾಂಕ ವ್ಯವಹಾರವೆಲ್ಲ ಕಟ್ಟಾಗಿ ಹೋದುದರಲ್ಲಿ ಆಶ್ಚರ್ಯವೇನಿದೆ? ಈ ವ್ಯವಹಾರವು ಎಂದಿನಂತೆ ಸುಗಮವಾಗಿಯೂ ಸುವ್ಯವಸ್ಥಿತವಾಗಿಯೂ [illegible] ಪ್ರಾರಂಭವಾಗಬಹುದೆಂಬುದನ್ನೂ ಹೇಳಲಿಕ್ಕಾಗುವಂತಿಲ್ಲ. ಮೇಲಾಗಿ, ಈಗೆರಡು ತಿಂಗಳಿಂದ ತುಂಬ ಕೂಡಿಬಿದ್ದ ಕೊಡಕೊಳ್ಳುವದನ್ನು ಪಶ್ಚಿಮ ಪಂಜಾಬವು ಆದೆಂತು ಹಸನಗೊಳಿಸುವದೋ? ಯುರೋಪಿಯನ್ನರಿಂದ ನಡೆಸಲ್ಪಟ್ಟ ಕೆಲವೊಂದು ಪ್ರಮುಖ ಬ್ಯಾಂಕುಗಳು ಮಾತ್ರ ಅತ್ಯಂತ ಪ್ರಯಾಸ ಪೂರ್ವಕವಾಗಿ ಚೆಕ್ಕುಗಳಿಗೆ ಹಣ ಕೊಡುವ ವ್ಯವಸ್ಥೆ ಮಾಡಬಲ್ಲವು ಎಂಬುದಾಗಿ ಇತ್ತೀಚಿನ ವರದಿಯಿಂದ ತಿಳಿದು ಬರುತ್ತಿದೆ. ಇದೇ ಬಗೆಯಾಗಿ ವಿಮಾ ವ್ಯವಹಾರವೂ ಇನ್ನುಳಿದ ವ್ಯವಸಾಯುಗಳೂ ಬದುಕಲೇ ಬಿಡಲೇ ಎನ್ನುವ ಸ್ಥಿತಿಗೆ ಬಂದಿವೆ.

ಸಿಂಧದ ಹಣೆಯ ಬರಹವು ಕೂಡ ಇದಕ್ಕೆ ಹೊರತಿಲ್ಲದಾಗಿದೆ. ಸಾಮಾನ್ಯವಾಗಿ ಸಿಂಧದ ಎಲ್ಲ ವಾಣಿಜ್ಯ ವ್ಯವಹಾರವನ್ನೂ ತಮ್ಮ ಹಿಡಿತದಲ್ಲಿಟ್ಟುಕೊಂಡ ಸಿಂಧಿ ವರ್ತಕರನೇಕರು ಮುಂಬಯಿಗೂ ಪೋರ್ಟಬಿಕಾಕ್ಕೂ ಹೋಗಿಬಿಟ್ಟಿದ್ದಾರೆ. ಹಿಂದುಸ್ತಾನ ಪಾಕಿಸ್ತಾನಗಳಲ್ಲಿ ಈ ಬಗೆಯ ವೈಷಮ್ಯ ಭಾವವೇ ಮುಂದರಿದುದಾದರೆ ಕಾಠಿಯಾವಾಡದಲ್ಲಿ ಹೊಸ ಹೊಸ ಬಂದರಗಳು ನಿರ್ಮಾಣವಾಗಿ ಕರಾಚಿಯ ವ್ಯಾಪಾರ ವ್ಯವಹಾರದ ಬಹುಭಾಗವು ಕಡಿಮೆಯಾಗಬಹುದೆಂಬ ದೂರದೃಷ್ಟಿಯು ಪಾಕಿಸ್ತಾನದ ಅಧಿಕಾರಿಗಳಿಗೆ ಇರುವಂತೆ ಕಂಡುಬರುವದಿಲ್ಲ.

ಆದ್ದರಿಂದ ಪಾಕಿಸ್ತಾನದ ಆರ್ಥಿಕ ಭದ್ರತೆಯೂ ಆದರ ಪತ್ತೂ ಇಂದು ಹೊಯ್ದಾಡುವ ಪರಿಸ್ಥಿತಿಯಲ್ಲುಂಟು ಎಂದು ಹೇಳಿದರೆ ಅದು ಅತಿಶಯೋಕ್ತಿಯಾಗಲಿಕ್ಕಿಲ್ಲ. ಇದೆಲ್ಲದರ ಪರಿವೆ ಪಾಕಿಸ್ತಾನ ಸರಕಾರಕ್ಕೆ ಇಲ್ಲದಿಲ್ಲ ಎಂಬುದು ಅದು ಇತ್ತೀಚೆಗೆ ಫಾಯನಾನ್ಸ ಕಾರ್ಪೋರೇಶನ್ ಎಂಬ ಸಂಸ್ಥೆಯನ್ನು ತೇಲಬಿಟ್ಟ ರೀತಿಯನ್ನು ಪರಿಶೀಲಿಸಿದರೆ ಕಂಡುಬರದಿರದು. ಈ ಫಾಯನಾನ್ಸ ಕಾರ್ಪೋರೇಶನ್ ಸಂಸ್ಥೆಯು ೬ ಕೋಟಿ ರೂಪಾಯಿಗಳ ದೈನಂದಿನದ ವೆಚ್ಚದ ಮೂಲ ಧನದಿಂದ ಕರಾಚಿಯಲ್ಲಿ ಸ್ಥಾಪಿಸಲ್ಪಟ್ಟದೆ. ಕಾರಖಾನೆಗಳ ಯಜಮಾನರಿಗೆ ಈ ವರ್ಷದ ಅರಳೆಯ ಬೆಳೆಯನ್ನು ಕೊಳ್ಳಲು ಮತ್ತು ಕೊಡಲು ಸಹಾಯ ನೀಡಲೋಸುಗ ಈ ಸಂಸ್ಥೆಯ ಜನನವಾಗಿದೆಯಂತೆ. ಇದರ ತೆತ್ತ ಮೂಲಧನವು ಒಂದು ಕೋಟಿಯಾಗುವದು. ಇದರ ಪಾಲುಗಳು ಪಾಕಿಸ್ತಾನ ಸರಕಾರ, ಹಬೀಬ ಬ್ಯಾಂಕ, ಮತ್ತು ಬ್ಯಾಂಕ ಆಫ ಆಸ್ಟ್ರೇಲೇಸಿಯಾಗಳ ನಡುವೆ ಹಂಚಲ್ಪಟ್ಟವೆ. ಪಾಕಿಸ್ತಾನದ ಇಂದಿನ ಆರ್ಥಿಕ ಪರಿಸ್ಥಿತಿಯು ಮ[illegible] ಸಂಸ್ಥೆಯಲ್ಲಿ ಜನರಾರೂ ಹಣ[illegible] ಮುಂದೆ ಬರಲಾರರೆಂದು ಪಾಕಿಸ್ತಾನ ಸರ[illegible] ಮನವರಿಕೆಯಾದಂತೆ ತೋರುತ್ತದೆ. ಎಂದೇ ಇದರ ಪಾಲುಗಳನ್ನು ಕೂಡ ಜನತೆಗೆ ಹಂಚಿ ಹೋಗಿಲ್ಲ. ಈ ವಿಷಯದಲ್ಲಿ ಈ ವಿಧವಾಗಿ ಪಾಕಿಸ್ತಾನ ಸರಕಾರವು ನಡೆದುದರ ರಹಸ್ಯವೇನೇ ಇರಲಿ ಆಗಸ್ಟ ೧೫ ನೇ ತಾರೀಖಿನಿಂದ ಪಾಕಿಸ್ತಾನದ ಆರ್ಥಿಕ ಭದ್ರತೆಯು ಶಿಥಿಲವಾಗಿದೆ ಎಂಬುದೇನು ಸುಳ್ಳಲ್ಲ.

# ಕಾಶ್ಮೀರದಲ್ಲಿ ಬ್ರಿಟಿಶ ವಿಮಾನ-ದಲದ ಕೈವಾಡವಿಲ್ಲ

ಕಾಶ್ಮೀರದಲ್ಲಿಯ ದಂಡಿನ ಕಾರ್ಯದಲ್ಲಿ ಬ್ರಿಟಿಶ ದಾಳಿಗಗಳನ್ನು ಉಪಯೋಗಿಸಿಲ್ಲವೆಂದೂ ಹಾಗೆ ಮಾಡುವ ಆಲೋಚನೆ ಕೂಡ ಇರಲಿಲ್ಲವೆಂದೂ ಬ್ರಿಟನ್ನಿನ ಸಾಗರೋತ್ತರ ವಿಮಾನ ದಲ ಪ್ರಕಟಿಸಿದೆ.

ಈ ಪತ್ರಿಕೆಯು ಹುಬ್ಬಳ್ಳಿ ಸಂಯುಕ್ತ-ಕರ್ನಾಟಕ ಮುದ್ರಣಾಲಯದಲ್ಲಿ 'ಲೋಕಶಿಕ್ಷಣ ಟ್ರಸ್ಟ'ದ ಪರವಾಗಿ ಹ. ರಾ. ಮೋಹರೆಯವರಿಂದ